

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

**೨೦೧೫–೧೬ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ**
**ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ**

# "ಮೊಗಳ್ಳಿ ಗಣೇಶರ ಕಥೆಗಳಲ್ಲಿನ ವಿಭಿನ್ನ ನೆಲೆಗಳು"


ನಿಬಂಧಕಾರರು

**ಹರೀಶ ಎಂ.ಎ.**

ನೋಂದಣಿ ಸಂಖ್ಯೆ – KVTM/K 150901030052
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್.ಎಸ್. ಶಂಕರೇಗೌಡ**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ
ಮಹಾರಾಣಿ ಮಹಿಳಾ ಕಲಾ ಕಾಲೇಜು
ಮೈಸೂರು



**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ, ಮೈಸೂರು**

೨೦೧೫–೧೬



# ಕನ್ನಡ ವಿಶ್ವವಿದ್ಯಾಲಯ
# ಹಂಪಿ



೨೦೧೫–೧೬ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ

# "ಮೊಗಳ್ಳಿ ಗಣೇಶರ ಕಥೆಗಳಲ್ಲಿನ ವಿಭಿನ್ನ ನೆಲೆಗಳು"

ನಿಬಂಧಕಾರರು

**ಹರೀಶ ಎಂ.ಎ.**

ನೋಂದಣಿ ಸಂಖ್ಯೆ – KVTM/K 150901030052
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಸ್.ಎಸ್. ಶಂಕರೇಗೌಡ**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ
ಮಹಾರಾಣಿ ಮಹಿಳಾ ಕಲಾ ಕಾಲೇಜು
ಮೈಸೂರು

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೫–೧೬

## ಪರಿವಿಡಿ

# ಮೊಗಳ್ಳಿ ಗಣೇಶರ ಕಥೆಗಳಲ್ಲಿನ ವಿಭಿನ್ನ ನೆಲೆಗಳು


| ಅಧ್ಯಾಯಗಳು | | ಪಠ್ಯ ಶೀರ್ಷಿಕೆ | ಪುಟ ಸಂಖ್ಯೆ |
|---|---|---|---|
| ಅಧ್ಯಾಯ – ೧ | : | ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ | ೧–೫ |
| ಅಧ್ಯಾಯ – ೨ | : | ಸಣ್ಣಕಥೆಗಳ ಉಗಮ ಮತ್ತು ವಿಕಾಸ | ೧–೧೬ |
| ಅಧ್ಯಾಯ – ೩ | : | ಮೊಗಳ್ಳಿ ಅವರ ಬದುಕು ಮತ್ತು ಬರೆಹ | ೧೭–೧೮ |
| ಅಧ್ಯಾಯ – ೪ | : | ಮೊಗಳ್ಳಿ ಕಥೆಗಳಲ್ಲಿನ ಕೌಟುಂಬಿಕ ನೆಲೆಗಳು | ೧೯–೭೦ |
| | | ೧.೧. ಹಸಿವು ಮತ್ತು ಬಡತನ | |
| | | ೧.೨. ಸ್ತ್ರೀ ಪಾತ್ರದ ಚಿತ್ರಣ | |
| | | ೧.೩. ಮೌಢ್ಯತೆಗಳ ಪ್ರತಿಬಿಂಬ | |
| | | ೧.೪. ಮಕ್ಕಳು ಮತ್ತು ಮೂಕ ಪ್ರಾಣಿಗಳು | |
| ಅಧ್ಯಾಯ – ೫ | : | ಕಥೆಗಳಲ್ಲಿನ ಸಾಮಾಜಿಕ ಸ್ಥಿತ್ಯಂತರಗಳು | ೭೧–೮೭ |
| | | ೧.೧. ಗ್ರಾಮ್ಯ ಜೀವನದ ಮೂಲ ಸೆಲೆಗಳು | |
| | | ೧.೨. ಜಾತ್ಯಾತೀತ ನೆಲೆಗಳು | |
| | | ೧.೩. ಕಥೆಗಳು ಪ್ರತಿಪಾದಿಸುವ ತಾತ್ವಿಕತೆ | |
| ಅಧ್ಯಾಯ – ೬ | : | ಕಥೆಗಳಲ್ಲಿ ವಸ್ತು, ಭಾಷೆ, ತಂತ್ರ | ೮೮–೯೪ |
| | | ಸಮಾರೋಪ | ೯೫–೯೮ |
| | | ಗ್ರಂಥಋಣ | ೯೯–೧೦೦ |


*****

# ಮಾರ್ಗದರ್ಶಕರ ಪ್ರಮಾಣಪತ್ರ

೨೦೧೫–೧೬ನೆಯ ಸಾಲಿನಲ್ಲಿ ಕ್ರಮ ಸಂಖ್ಯೆ: KVTM/K 150901030052ರ ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಹರೀಶ ಎಂ.ಎ.** ಅವರು ನನ್ನ ಮಾರ್ಗದರ್ಶನದಲ್ಲಿ **"ಮೊಗಳ್ಳಿ ಗಣೇಶರ ಕಥೆಗಳಲ್ಲಿನ ವಿಭಿನ್ನ ನೆಲೆಗಳು"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಳಿಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಡಾ. ಶಂಕರೇಗೌಡ. ಎಸ್.ಎಸ್. ಎಂ.ಎ. ಪಿಹೆಚ್.ಡಿ
ಕನ್ನಡ ಸಹಾಯಕ ಪ್ರಾಧ್ಯಾಪಕ
ಮಹಾರಾಣಿ ಮಹಿಳಾ ಕಲಾ ಕಾಲೇಜು,
ಜೆ.ಎಲ್.ಬಿ. ರಸ್ತೆ, ಮೈಸೂರು, ಕರ್ನಾಟಕ-570 005

ಡಾ. ಎಸ್.ಎಸ್. ಶಂಕರೇಗೌಡ
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ
ಮಹಾರಾಣಿ ಮಹಿಳಾ ಕಲಾ ಕಾಲೇಜು
ಮೈಸೂರು

ಮೈಸೂರು
ದಿನಾಂಕ: ೧೬–೦೭–೨೦೧೬

## ಅಭ್ಯರ್ಥಿಯ ಘೋಷಣಾ ಪತ್ರ

**"ಮೊಗಳ್ಳಿ ಗಣೇಶರ ಕಥೆಗಳಲ್ಲಿನ ವಿಭಿನ್ನ ನೆಲೆಗಳು"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ: KVTM/K 150901030052ರ ವಿದ್ಯಾರ್ಥಿಯಾದ ನಾನು ೨೦೧೫-೧೬ನೆಯ ಸಾಲಿನ ಪರೀಕ್ಷೆಗಾಗಿ **ಡಾ. ಎಸ್.ಎಸ್. ಶಂಕರೇಗೌಡ, ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Harisha MA

ಮೈಸೂರು
ದಿನಾಂಕ: ೧೬-೦೭-೨೦೧೬

**(ಹರೀಶ ಎಂ.ಎ.)**
೨೦೧೫-೧೬ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರಪಂಚದಲ್ಲಿ ಮಾನವನಿಗೆ ಪ್ರಧಾನವಾದ ಸ್ಥಾನವೊಂದಿದೆ. ಕಾರಣ ಆತ ಸೃಜನಶೀಲವಾದ ನವನವೀನ ತರವಾದಂತಹ ಆಲೋಚನೆಯನ್ನು ಹುಡುಕುವ ಧಾಟಿಯನ್ನು ಕಂಡುಕೊಂಡಿದ್ದಾನೆ. ಈ ಮುಖೇನ ಮನುಷ್ಯ ಸಂಬಂಧವನ್ನು ಬೆಸೆಯುವ ಮಹತ್ತರವಾದ ಸಾಹಿತ್ಯವನ್ನು ಕಂಡುಕೊಂಡಿದ್ದಾನೆ.

ಕನ್ನಡ ಸಣ್ಣ ಕಥಾಸಾಹಿತ್ಯದಲ್ಲಿ ವಿವಿಧ ವೈವಿಧ್ಯಮಯವಾದ ಬದುಕು ಅನಾವರಣಗೊಳ್ಳಲು ಈ ಸಣ್ಣಕಥಾ ಸಾಹಿತ್ಯವೇ ಮುಖ್ಯ ಪ್ರೇರಕ. ನಮ್ಮ ಕನ್ನಡ ಸಾಹಿತ್ಯವು ಸಾವಿರಾರು ವರ್ಷಗಳ ಇತಿಹಾಸವನ್ನು ಪೂರ್ವದ ಹಳೆಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡವೆಂಬುದಾಗಿ ವಿಂಗಡಿಸಲಾಗಿದೆ. ತದನಂತರ ಸಣ್ಣಕತೆಯ ಒಡಲಾದ ಹೊಸಗನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಎಂಬ ಪ್ರಕಾರಗಳಲ್ಲಿ ಕಾಣಬಹುದು.

ಆರ್ವಾಚೀನ ಕಾಲದಿಂದಲೂ ಅರ್ಥಾತ್ ಹಿಂದಿನ ಕಾಲದಿಂದಲೂ ಪಾಮರರು, ದಲಿತರು ಎಂದರೆ ಮಾನವರಲ್ಲ ಎಂದು ತಿಳಿದು ಅವರ ಬದುಕಿನ ಹಸಿಯಾದ ಚಿತ್ರಣವನ್ನು ಸಾಹಿತ್ಯದಲ್ಲಿ ತರಲು ಹಲವರು ಕಡೆಗಣಿಸಿದರೆ, ಸಮಾನತೆಗಾಗಿ ಹಪಹಪಿಸುವ ಮಾನವೀಯ ಪರಕಾಳಜಿಯುಳ್ಳ ಕೆಲವರು ಸಾಹಿತ್ಯ ಪ್ರಪಂಚದಲ್ಲಿ ಪ್ರಾಸಂಗಿಕವಾಗಿ, ದಲಿತರ ಪರವಾಗಿ ಸಮಾನತೆಯ ಕಾರಣಕ್ಕಾಗಿ ಮತ್ತು ಸಮಾಜಮುಖಿಯಾದ ಮನ್ವಂತರ ದೃಷ್ಟಿಯಿಂದ ದಲಿತ ಬದುಕನ್ನು ಚಿತ್ರಿಸಿದ್ದಾರೆ. ಪೂರ್ವ ಸಾಹಿತ್ಯದ ಕಾಲಘಟ್ಟದಲ್ಲಿ ಕನ್ನಡದ ಆದಿ ಕವಿ, ಮೆರುಕವಿ, ಪಂಪ "ಮನುಷ್ಯಜಾತಿ ತಾನೊಂದೆ ವಲಂ" ಎಂಬ ಹೇಳಿಕೆಯಲ್ಲಿ ಸಮಾನತೆಯ ತುಡಿತದ ಸಂವೇದನೆಯನ್ನು ಕಾಣಬಹುದು. ಸಮಾನತೆಯ ಚಿಗುರು ಕನ್ನಡ ಸಾಹಿತ್ಯದಲ್ಲಿ ನಾನಾ ರೀತಿಯಲ್ಲಿ ವ್ಯಕ್ತಗೊಂಡಿರುವುದು ಗಮನಾರ್ಹವಾದದು.

ವಚನಸಾಹಿತ್ಯದ ಜಾತ್ಯಾತೀತವಾಗಿ ಶರಣರ ಉಕ್ತಿಯಲ್ಲಿ ಸಮಾನತೆಯ ಅಂಶವನ್ನು ವಚನಗಳ ಮುಖೇನ ಸಾದರಪಡಿಸಿದೆ. ಹಾಗೆ ಮುಂದುವರೆದಂತೆ ದಾಸಸಾಹಿತ್ಯದ ಪರಂಪರೆಯಲ್ಲಿ ಹಿಮಾಲಯದ ಎತ್ತರದಿಂದ ಹರಿದುಬಂದ ಗಂಗೆಯು ಬಯಲಿನಲ್ಲಿ ಇಳಿದು ನೆಲವನ್ನೆಲ್ಲ ಫಲಪ್ರದ ಮಾಡುವಂತೆ, ಕನ್ನಡ ಸಾಹಿತ್ಯದಲ್ಲಿ ಶರಣ ಮತ್ತು ದಾಸರ ಸಾಹಿತ್ಯದಲ್ಲಿ ಕುಲದ ವಿಚಾರವನ್ನು ತಾತ್ವಿಕ ನೆಲೆಗಟ್ಟಿನಲ್ಲಿ ತಮ್ಮ ಕೀರ್ತನೆಗಳ ಮುಖಾಂತರ ಸಾದರಪಡಿಸಿದ್ದಾರೆ.

ಇವರುಗಳಲ್ಲಿ ಮುಖ್ಯವಾಗಿ ಪುರಂದರದಾಸ ಹೇಳಿರುವಂತೆ "ಮಲವ ತೊಳೆಯ ಬಲ್ಲರಲ್ಲದೆ, ಮನವ ತೊಳೆಯ ಬಲ್ಲರೆ" ಇದರಂತೆಯೇ ಕನಕದಾಸರು ಹೇಳುವುದು ಕುಲಕುಲವೆನ್ನುತ್ತಿಯರು ಕುಲ ಯಾವುದು ಸತ್ಯ ಸುಖವುಳ್ಳ ಜನರಿಗೆ ಆತ್ಮ ಯಾವ ಕುಲ, ಜೀವ ಯಾವ ಕುಲ, ತತ್ವೇಂದ್ರಿಯ ಯಾವ ಕುಲ ಎಂಬಂತಹ ದಾಸರ ಅನುಭಾವದ ಮಾತುಗಳಲ್ಲಿ ಸಮಾನತೆಯ ಪರಿಕಲ್ಪನೆಯನ್ನು ಕಾಣಬಹುದು.

ದಾಸರು ಸೂಕ್ಷ್ಮತೆಯಲ್ಲಿ ಜೀವ ಸಂಕುಲಗಳ ಪರಕಾಳಜಿಯುಳ್ಳ, ಸಾರ್ವತ್ರಿಕ–ವಾದಂತಹ ಸಮಾನತೆಯ ನುಡಿಗಳನ್ನು ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ, ವಿಡಂಬನಾತ್ಮಕವಾಗಿಯೂ ತಮ್ಮ ಕೀರ್ತನೆಗಳ ಮುಖೇನ ಅಭಿವ್ಯಕ್ತಿಸಿದ್ದಾರೆ. ಮುಂದೆ ನವೋದಯ, ನವ್ಯ, ಪ್ರಗತಿಶೀಲ ಕನ್ನಡ ಸಾಹಿತ್ಯದ ಕಾಲಘಟ್ಟಗಳು ಉಗಮಗೊಂಡವು. ಈ ಮೂರು ಕಾಲಘಟ್ಟದಲ್ಲಿ ದಲಿತ ಪರವಾದ ಚಿಂತನೆಗಳ ಲಹರಿ ಪ್ರಾಸಂಗಿಕವಾಗಿ ಕಂಡುಬಂದರೂ, ಈ ಕಾಲಘಟ್ಟದ ಕವಿಗಳು ಹೆಚ್ಚಾಗಿ ದಲಿತರ ವಾಸ್ತವಿಕ ಜೀವನದ ಚಿತ್ರಣದ ಬಿಂಬವನ್ನು ಬಹುಮುಖವಾಗಿ ಪ್ರತಿಪಾದಿಸುವುದಿಲ್ಲ. ನಂತರ ಎಪ್ಪತ್ತರ ದಶಕದಲ್ಲಿ ತಳಸಮುದಾಯದ ಜನರ ಆಂತರ್ಯದ ಮೂಕ ವೇದನೆಯನ್ನು ಹಸಿಹಸಿಯಾಗಿ ತಮ್ಮ ಪ್ರಾದೇಶಿಕ ನುಡಿಗಳಲ್ಲಿ ಅಭಿವ್ಯಕ್ತಿಸುವಂತಹ ಪಂಥವೊಂದು ಹುಟ್ಟಿಕೊಂಡಿತ್ತು. ಹೀಗೆ ಉಗಮಿಸಿದ ಪಂಥವೇ ದಲಿತ ಬಂಡಾಯ ಪಂಥವಾಗಿದೆ.

ದಲಿತ ಪಂಥವು ಆಂಧ್ರದ ವಿರಸಂ, ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿ, ತೆಲಗಿನ ದಿಗಂಬರ ಕಾವ್ಯ, ಕೇರಳದಲ್ಲಿ ಜನಪ್ರಿಯವಾದ ಮಾರ್ಕ್ಸ್‌ವಾದಿ ಬರಹ, ದಕ್ಷಿಣ ಆಫ್ರಿಕಾದ ಕಪ್ಪು ಸಾಹಿತ್ಯ, ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ ಎಂಬಂತಹ ಸಿದ್ಧಾಂತಗಳು ದಲಿತ ಬಂಡಾಯ ಸಾಹಿತ್ಯ ಮೇಲೆ ಪರಿಣಾಮಕಾರಿಯಾದಂತಹ ಪ್ರಭಾವ ಪ್ರೇರಣೆಯನ್ನು ನೀಡಿದವು.

ಸಂಕ್ರಮಣ, ಅನ್ವೇಷಣೆ, ಮುಂಗಾರು, ಪಂಚಮ ಹೊಸದಿಕ್ಕು, ಕೆಂಬಾವುಟ ಮುಂತಾದ ಪತ್ರಿಕೆಗಳು ಮುಖ್ಯವಾಹಿನಿಗೆ ತರಲು ಸಹಕಾರಿಯಾದವು. ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅವಮಾನಿತ ಅಕ್ಷರಸ್ಥ ಸಮುದಾಯ ತಮ್ಮ ಅಭಿವ್ಯಕ್ತಿಯ ಮಾಧ್ಯಮಕ್ಕೆ ತಮ್ಮ ಕೇರಿಯ ಪ್ರಾದೇಶಿಕದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳು, ಅವಮಾನ ದೌರ್ಜನ್ಯಗಳನ್ನು ಸ್ಪಷ್ಟವಾಗಿ ದಾಖಲಿಸತೊಡಗಿದ ಕೂಡಲೇ ಒಂದು ಜನಾಂಗೀಯ ಸಾಹಿತ್ಯ ಸಿದ್ಧವಾಗಿತ್ತು. ನಾವು ಇದನ್ನು ವಿಶಾಲ ಅರ್ಥದಲ್ಲಿ ದಲಿತ ಸಾಹಿತ್ಯವೆಂದು ಕರೆಯುತ್ತೇವೆ.

ಈ ತಳಸಮುದಾಯವನ್ನು ಸಾಹಿತ್ಯದಲ್ಲಿ ನಾವು ಮೊದಲು ಗುರುತಿಸಿರುವುದು, ದೇವನೂರ ಮಹಾದೇವ ಅವರು ಬರೆದಿರುವ ಏಳು ಕಥೆಗಳ "ದೇವನೂರು" ಸಂಕಲನದಿಂದ ಮುಂದುವರೆದು, ಡಾ. ಸಿದ್ದಲಿಂಗಯ್ಯನವರು ಪ್ರಮುಖ ರೂವಾರಿ, ಪ್ರೊ. ಮ.ನ.ಜವರಯ್ಯ, ಡಾ. ಚನ್ನಣ್ಣವಾಲೀಕಾರ, ಡಾ. ಎಲ್. ಹನುಮಂತಯ್ಯ, ಜಂಬಣ್ಣ ಅಮರಚಿಂತ, ಬೋಳೆ ಬಂಡಪ್ಪ, ದೇವಯ್ಯ ಹರವೆ, ಅರವಿಂದ ಮಾಲಗತ್ತಿ, ಮೊಗಳ್ಳಿ ಗಣೇಶ್ ಅವರು ಈ ಪಂಥದ ಪ್ರಮುಖ ಕವಿಗಳಾಗಿ ಕಂಡುಬರುತ್ತಾರೆ.

ಮೊದಲ ತಲೆಮಾರಿನ ದಲಿತ ಸಾಹಿತ್ಯಗಳಲ್ಲಿ ಡಿ.ಗೋವಿಂದದಾಸ, ಸೊಸಲೆ ಸಿದ್ದಪ್ಪ, ಜಿ.ವೆಂಕಟಯ್ಯ, ಎನ್.ನರಸಿಂಹಯ್ಯ, ಬಸವರಾಜು ಕುಕ್ಕರಹಳ್ಳಿ ಗಮನಾರ್ಹರು. ನಾಲ್ಕನೇ ತಲೆಮಾರಿನ ಹೊತ್ತಿಗೆ ದಲಿತ ಸಾಹಿತಿಗಳಾದ ಎನ್.ಕೆ.ಹನುಮಂತಯ್ಯ, ಟಿ.ಯಲ್ಲಪ್ಪ, ತುಂಬಾಡಿ ರಾಮಯ್ಯ, ಸುಬ್ಬು ಹೊಲೆಯರ್, ಪ್ರೊ. ಎಮ್.ಎಸ್.ಶೇಖರ್, ಮಹದೇವ ಶಂಕರನಪುರ ಪ್ರಮುಖವಾಗಿ ಗೋಚರಿಸುತ್ತಾರೆ. ಎಪ್ಪತ್ತರ ದಶಕದ ನಂತರ, ಆಧುನಿಕ ಕನ್ನಡ ಸಾಹಿತ್ಯದ ಒಂದು ಘಟ್ಟವಾಗಿ ದಲಿತ ಬಂಡಾಯ ಪರಂಪರೆ ಕಂಡುಬರುತ್ತದೆ. ದಲಿತ ಸಾಹಿತ್ಯ ಅಭಿವ್ಯಕ್ತಿಗೆ ಪರಂಪರೆ ಸೃಷ್ಟಿಗೆ ಎಪ್ಪತ್ತರ ದಶಕ ಒಂದು ಮಹತ್ವವಾದ ಘಟ್ಟವಾಗಿದೆ. ಅಕ್ಷರಜ್ಞಾನ ಪಡೆದ ದಲಿತರರೆ ತನ್ನ ಸ್ವಂತ ಅನುಭವಗಳನ್ನು ಅಭಿವ್ಯಕ್ತಿಸಲು ಈ ಘಟ್ಟ ಪ್ರಮುಖವೆನಿಸುತ್ತದೆ.

ದಲಿತರ ನೈಜ ಸಂವೇದನೆಯ ತಾಜತನವನ್ನು ಅಭಿವ್ಯಕ್ತಿಸಲು, ಪಟ್ಟಭದ್ರ ಹಿತಶಕ್ತಿಗಳ ದ್ವಿಮುಖತೆಯನ್ನು ತಮ್ಮ ಕಾವ್ಯಗಳಲ್ಲಿ ನಿಷ್ಠುರಾತ್ಮಕವಾಗಿ ವಿಡಂಬನೆ ಮಾಡಲಾಗಿದೆ. ಶತಶತಮಾನಗಳಿಂದ ಅಕ್ಷರ ವಂಚಿತರಾಗಿದ್ದ, ಶೋಷಣೆಗೆ ಒಳಪಟ್ಟಿದ್ದ ಜನತೆ ಅಕ್ಷರ ಸಂಸ್ಕೃತಿ ಪಡೆದು ತಮ್ಮ ನೋವುಗಳನ್ನೂ ಶೋಷಣೆಯ ಆಳ ಅರಿವುಗಳನ್ನು ತಮ್ಮ ಕಥಾಸಂಕಲನಗಳಲ್ಲಿ ಮುಖಾಮುಖಿಗೊಳಿಸಿದ್ದಾರೆ.

ದಲಿತ ಕೇರಿಯ ವಿಭಿನ್ನ ಸಂಸ್ಕೃತಿಯನ್ನು ಮತ್ತು ತಮ್ಮನ್ನು ತುಚ್ಚವಾಗಿ ಕಾಣುತ್ತಿದ್ದ, ಮೇಲುವರ್ಗದ ಜನಾಂಗದ ವಿರುದ್ಧ ಅವರದೇ ಆದ ಅಭಿವ್ಯಕ್ತಿಯ ಬರವಣಿಗೆಯ ಧ್ವನಿಯಲ್ಲಿ ನಿಷ್ಠುರತೆಯನ್ನು ವ್ಯಕ್ತಪಡಿಸಿರುವುದು ಅಪೂರ್ವವಾದುದು. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ತಳ ಸಮುದಾಯದ ಜೀವನಾಡಿಯನ್ನು ಸಮಾಜದ ಮುಖ್ಯವಾಹಿನಿಗೆ ತರಲು ಮೊಗಳ್ಳಿ ಗಣೇಶ್ ಅವರು ತಮ್ಮ ಬರೆಹದಲ್ಲಿ ನಿಜಸ್ಥಿತಿಯನ್ನು ತಾತ್ವಿಕವಾದ ನೆಲೆಗಟ್ಟಿನಲ್ಲಿ, ಅನುಭವದ ಪ್ರಾದೇಶಿಕ ಭಾಷೆಗಳ ನೆಲೆಗಟ್ಟಿನಲ್ಲಿ ದಲಿತ ಜೀವನದ ವಿವಿಧ ಮಜಲುಗಳನ್ನು ಕಥೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಹೀಗೆ ತಾನು ಗ್ರಹಿಸಿದ್ದನ್ನು ತನ್ನದೇ ಆದ ವಿಶಿಷ್ಟ ಕಾಣಿಕೆ ಹಾಗೂ ಕಲಾತ್ಮಕತೆ ಮಾಂತ್ರಿಕ ಸ್ಪರ್ಶದ ಮೂಲಕ ಅಭಿವ್ಯಕ್ತಿಸುವ ಸೋಪಜ್ಞವಾದ ಮಾರ್ಗವನ್ನು ಕಂಡುಕೊಳ್ಳುತ್ತಾರೆ.

ಕಥೆಗಳ ರಚನೆಯನ್ನು ತಮ್ಮ ಸಿದ್ಧಿಯನ್ನಾಗಿ ಮಾಡಿಕೊಂಡು ಯಾವುದೇ ಸಿದ್ಧಾಂತಗಳಿಗೆ ಜೋತು ಬೀಳದೇ ಇಡೀ ಮಾನವ ಪರವಾದ ಅಖಂಡತೆಯ ನೆಲೆಯಲ್ಲಿ ತಮ್ಮ ಬರವಣಿಗೆಯನ್ನು ಅಭಿವ್ಯಕ್ತಪಡಿಸಿ ಕನ್ನಡ ಕಥಾಲೋಕದ ಸಾಧ್ಯತೆಯನ್ನು ವಿಸ್ತಾರಗೊಳಿಸಿದವರು ಮೊಗಳ್ಳಿ ಗಣೇಶ್ ಎಂದರೆ ತಪ್ಪಾಗಲಾರದು.

ದಲಿತ ಸಾಹಿತ್ಯದ ಸಂದರ್ಭದಲ್ಲಿ ಮಾನವನ ಬದುಕನ್ನು ಅತ್ಯಂತ ಗಂಭೀರವಾದ ನೆಲೆಯಲ್ಲಿ ನೋಡುವ ಇವರು ತಮ್ಮ ಕಾಲಘಟ್ಟದ ಸಾಧ್ಯತೆ ಮತ್ತು ಸವಾಲುಗಳನ್ನು ಭವಿಷ್ಯದ ದೂರದೃಷ್ಟಿತನವನ್ನು ಹೊಂದಿದ್ದಾರೆ. ಮೊಗಳ್ಳಿ ಗಣೇಶ್ ಅವರ ಕಥೆಗಳಲ್ಲಿ ಮಾನವೀಯ ಅಂತಃಕರಣದ ಚಿಕಿತ್ಸೆಯನ್ನು ನೀಡುವಂತಹ ಸಾಹಿತ್ಯದ ಕಾಯಕ ಕಂಡುಬರುತ್ತದೆ. ಹಳ್ಳಿಗಾಡಿನ ದಲಿತ ಜನರ ಮೇಲಿನ ಶೋಷಣೆ, ಅಪಮಾನ, ಅತ್ಯಾಚಾರ, ದೌರ್ಜನ್ಯ ಇವುಗಳಿಂದ ಉಂಟಾಗುವ ಸಿಟ್ಟು, ಆಕ್ರೋಶ, ಪ್ರತಿಭಟನೆ ಮುಂತಾದವುಗಳು ಇವರ ಕಥೆಗಳ ತಿರುಳಾಗಿವೆ.

ಸಂವಿಧಾನ ಜಾರಿಗೆ ಬಂದು ಅರವತ್ತೈದು ವರ್ಷಗಳು ಕಳೆದಿವೆ. ಅರವತ್ತೈದು ವರ್ಷಗಳಲ್ಲಿ ಎರಡು ಸಾವಿರ ವರ್ಷಗಳಿಂದ ತಮ್ಮ ವಿದ್ಯೆಯನ್ನು ತಮ್ಮ ಅಧೀನದಲ್ಲಿಟ್ಟಿದ್ದ ಸಮುದಾಯದರವನ್ನು ಹಿಮ್ಮೆಟ್ಟಿಸಿದ್ದಾರೆ. ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳ ಮೂಲಕ ದಲಿತ ಸಾಹಿತ್ಯ ಪಂಥದ ವ್ಯಾಪ್ತಿಯ ಹರವನ್ನು ಈ ಕೆಳಕಂಡ ಕಥೆಗಳಲ್ಲಿ ವಿಸ್ತರಿಸಿದ್ದಾರೆ. ಇವುಗಳಲ್ಲಿ ಪ್ರಮುಖವಾಗಿ ಬುಗುರಿ, ಅತ್ತೆ, ಭೂಮಿ, ಮಣ್ಣು, ಕನ್ನೆಮಳೆ ಎಂಬ ಕಥಾಸಂಕಲನಗಳ ಕೆಲವು ಕಥೆಗಳ ಆಧಾರದ ಮೇಲೆ ಈ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಈ ಪ್ರಬಂಧ ಸಣ್ಣಕಥೆಗಳ ಉಗಮ, ವಿಕಾಸ, ಮೊಗಳ್ಳಿ ಗಣೇಶ್ ಅವರ ಬದುಕು ಬರಹ, ಕಥೆಗಳಲ್ಲಿನ ಸಾಮಾಜಿಕ ಸ್ಥಿತ್ಯಂತರಗಳು, ಕಥೆಗಳಲ್ಲಿ ವಸ್ತು, ಭಾಷೆ ತಂತ್ರ, ಸಮಾರೋಪ ಎಂಬ ಐದು ಪ್ರಮುಖ ಅಧ್ಯಾಯಗಳಲ್ಲಿ ಹರಡಿಕೊಂಡಿದೆ.

ಮೊಗಳ್ಳಿ ಗಣೇಶ್ ಅವರ ಕತೆಗಳಲ್ಲಿನ ಹಸಿವು ಮತ್ತು ಬಡತನ, ಮೌಢ್ಯತೆಗಳು, ಸ್ತ್ರೀಪಾತ್ರಗಳು, ಮಕ್ಕಳು ಮತ್ತು ಮೂಕಪ್ರಾಣಿಗಳು, ಗ್ರಾಮ್ಯಜೀವನದ ಮೂಲಸೆಲೆಗಳು, ಜಾತ್ಯಾತೀತ ನೆಲೆಗಳು, ಕಥೆಗಳ ಪ್ರತಿಪಾದಿಸುವ ತಾತ್ವಿಕತೆ, ಕಥೆಗಳ ವಸ್ತು, ಭಾಷೆತಂತ್ರವನ್ನು ವಸ್ತುನಿಷ್ಟವಾಗಿ ಸಂಶೋಧನೆಗೆ ಗುರಿಪಡಿಸುವುದು ಈ ಪ್ರಬಂಧದ ಆಶಯವಾಗಿದೆ.

# ಅಧ್ಯಾಯ ಎರಡು

# ಸಣ್ಣಕಥೆಗಳ ಉಗಮ ಮತ್ತು ವಿಕಾಸ

ಪ್ರಪಂಚದ ಎಲ್ಲಾ ಧರ್ಮಗಳು ಕಥೆಗಳನ್ನು ನೀತಿ ಬೋಧನೆಗಾಗಿ, ಸಂಸ್ಕೃತಿಯ ನಿರ್ಮಾಣಕ್ಕಾಗಿ ಒಂದು ಪ್ರಧಾನ ಮಾಧ್ಯಮವನ್ನಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಬೈಬಲ್, ಖುರಾನ್, ಮಹಾಭಾರತ, ರಾಮಾಯಣ, ಕೃತಿಗಳಲ್ಲಿ ಕಂಡುಬರುವ ಕೆಲವು ಕಥಾ ವ್ಯಾಖ್ಯಾನಗಳನ್ನು ಕಾಣಬಹುದು. ಭೂಮಿಯ ಮೇಲೆ ಜೀವಸಂಕುಲಗಳು ಜನ್ಮವೆತ್ತಿ ನಾಗರಿಕ ಜೀವನ ರೂಪುಗೊಂಡ ಮೇಲೆ ಅವುಗಳ ಜೊತೆಜೊತೆಯಲ್ಲಿಯೇ ಕಥೆಗಳೂ ಹುಟ್ಟಿಬಂದವು. ಮುಖ್ಯವಾಗಿ ಕಥೆಯ ಪದ್ಯ ಮತ್ತು ಗದ್ಯಗಳೆರಡರ ಸ್ವರೂಪದಲ್ಲಿ ಇರುತ್ತಿತ್ತು.

ಮಾತು ಮಾತು ಮಥಿಸಿ ಕಥೆಯಾಗಿ ಬೆಳೆಯುತ್ತಿತ್ತು. ಬರವಣಿಗೆಯೇ ಇಲ್ಲದಿದ್ದ ಸಮಾಜದಲ್ಲಿ ಕಥೆಗಳನ್ನು ಕೇಳಿ ನೆನಪಿನಲ್ಲಿ ಇಟ್ಟುಕೊಳ್ಳುತ್ತಿದ್ದರು. ಹಾಗೆಯೇ ಅದು ಒಂದು ಪರಿಪಾಠವಾಗಿತ್ತು. ಒಬ್ಬರಿಂದ ಇನ್ನೊಬ್ಬರಿಗೆ ಸಾಗುತ್ತಿದ್ದ ಕಥೆಯು ಕಾಲ-ದೇಶ-ಪರಿಸರ ಹಾಗೂ ಅವರವರ ಮಾತಿನ ಕಲ್ಪನೆಗನುಸಾರವಾಗಿ ಬದಲಾಗುತ್ತಾ, ಬೆಳೆಯುತ್ತಾ ಸಾಗುತ್ತಿತ್ತು. ಆದರೆ ವಿಶೇಷವಾಗಿ ಕಥೆಗಳು ಜನಸಾಮಾನ್ಯರ ಜೀವನ, ಆಸೆ, ನಿರಾಸೆ, ನೋವು, ನಲಿವು, ಧೈರ್ಯ, ಛಲ, ಸಾಹಸ ಮುಂತಾದವುಗಳನ್ನು ವಸ್ತುವಾಗಿಟ್ಟುಕೊಂಡು ರಚಿತವಾಗಿರುತ್ತಿದ್ದವು.

ನಂತರದ ಕಥೆಗಳಲ್ಲಿ ಗದ್ಯಕಥೆಗಳು ಬಂದವು. ಅದರಲ್ಲಿ ಕವಿರಾಜಮಾರ್ಗ, ವಡ್ಡಾರಾಧನೆ, ಜೊತೆಗೆ ಪದ್ಯ ಮತ್ತು ಗದ್ಯಮಿಶ್ರಿತವಾದ ಚಂಪೂಗ್ರಂಥಗಳು ಹೇರಳವಾಗಿ ದೊರೆಯುತ್ತವೆ.

ಇತಿಹಾಸ ಕಾವ್ಯಗಳು "ರಘುವಂಶ"ದಂಥ ಮಹಾಕಾವ್ಯಗಳು "ಪಂಚತಂತ್ರ" ಹಿತೋಪದೇಶಗಳಂಥ ನೀತಿಕಥೆಗಳಿಂದ, ಕಥಾಸರಿತ್ಸಾಗರ, ಜಾತಕ ಕಥೆಗಳು, ಜೈನಕಥಾಸಾಹಿತ್ಯ, ಭಾರತದ ಎಲ್ಲ ಭಾಷೆಗಳಲ್ಲೂ ದೊರೆಯುವ ಜಾನಪದ ಕಥೆಗಳು ಹೀಗೆ ಕಥನ ಪ್ರಪಂಚದ ವಿಸ್ತಾರವಿದೆ. ಇವೆಲ್ಲ ಕಥನದ ಬೇರೆ ಬೇರೆ ಮಾದರಿಗಳಾದ್ದರಿಂದ ಈ ಕಥನ ಪ್ರಪಂಚ ವಿಸ್ತಾರದೊಂದಿಗೆ ವೈವಿಧ್ಯವನ್ನು ಹೊಂದಿದೆ.

ಪ್ರಮುಖವಾಗಿ ಹೆಸರೇ ಸೂಚಿಸುವಂತೆ ಸಣ್ಣಕತೆಯ ಪರಿಕಲ್ಪನೆಯೇ ಸಾಪೇಕ್ಷವಾದುದು. 'ಕಥೆ' ಎಂದರೇನು ಎನ್ನುವುದು ಸ್ಪಷ್ಟವಾಗದೇ ಸಣ್ಣ ಕತೆಯ ಸ್ವರೂಪ ತಿಳಿಯುವುದಿಲ್ಲ. "ಕಥೆ" ಕೂಡ ಕಥನ ಸಾಹಿತ್ಯದ ಒಂದು ಪ್ರಕಾರವಾದುದರಿಂದ 'ಕಥನ'ದ ವ್ಯಾಖ್ಯಾನವು ನಮಗೆ ಅಗತ್ಯವಾಗುತ್ತದೆ. ಈಗಿದ್ದ ರೂಪದಲ್ಲಿ ಕನ್ನಡ ಸಣ್ಣಕಥೆಗೆ ಪ್ರೇರಣೆ

ಪಶ್ಚಿಮದಿಂದ ದೊರೆತಿರುವುದು ನಿಜವಾದರು, ಅದರ ಬೇರುಗಳು ಭಾರತೀಯ ಕಥನ ಪರಂಪರೆಯಲ್ಲಿರುವುದರಿಂದ ಸಣ್ಣಕತೆಯನ್ನು ಕುರಿತ ಪಾಶ್ಚಿಮಾತ್ಯ ಕಲ್ಪನೆಗಳು ನಮಗೆ ಆಪ್ತವಾಗಲಾರವು. ಉದಾಹರಣೆಗೆ: "ಸಣ್ಣಕಥೆ ತನ್ನ ಸ್ವರೂಪದಲ್ಲಿ ಜನಾಂಗದಿಂದ ಜನಸಮುದಾಯದಿಂದ ದೂರವಾದದ್ದು ಎನ್ನುವ ಫ್ರಾಂಕ್ ಓಕೋನರರ ಹೇಳಿಕೆಯನ್ನೇ ನೋಡಬಹುದು. (O Connor 1965, 21) ಮೌಖಿಕ ಪರಂಪರೆಯಲ್ಲಿಯೇ ಬೆಳೆದುಬಂದ ಕನ್ನಡ ಸಣ್ಣಕತೆಯ ಸಂದರ್ಭದಲ್ಲಿ ಈ ಹೇಳಿಕೆ ಅಸಂಬದ್ಧವಾಗಿ ತೋರಿದರೆ ಆಶ್ಚರ್ಯವಿಲ್ಲ".[೧]

ಮನುಷ್ಯ ಭಾಷೆಯನ್ನು ಕಲಿತಂದಿನಿಂದ, ಬಹುಶಃ ಅವನಲ್ಲಿ ಮಾನವೀಯತೆಯ ಸೆಲೆಯೊಡೆದಂದಿನಿಂದ ಕತೆ ಹೇಳುತ್ತಿದ್ದಾನೆ. ಬಾಯಿಮಾತಿನಲ್ಲಿ, ಬರವಣಿಗೆಯಲ್ಲಿ ಹಲವು ವೇಷಗಳನ್ನು ಧರಿಸುವ ಭಾಷೆ ಅವನಿಗೆ ವಿಶೇಷ ಶಕ್ತಿಯನ್ನು ನೀಡಿದೆ. ಬಗೆಬಗೆಯ ಕತೆಗಳಲ್ಲಿ ಕಾಣುವಂಥ ಸಂಮ್ಮೋಹಕ ಗುಣ ಹಾಗೂ ಅರ್ಥಗರ್ಭಿತ ವರ್ಣನೆ ಶಬ್ದಗಳಿಗಿರುವ ವ್ಯಂಜಕ ಶಕ್ತಿಯನ್ನು ಸೂಚಿಸುತ್ತದೆ. ಕತೆಗೆ ವಾಹಕವಾಗುವ ಭಾಷೆ ಕಟ್ಟಬಲ್ಲುದು, ಕೆಡಿಸಬಲ್ಲುದು; ಬಂಧಿಸಬಲ್ಲುದು, ಬಿಡುಗಡೆ ಮಾಡಬಲ್ಲುದು, ಈ ಪರಿಕ್ರಮದಲ್ಲಿ ಅದು ತನ್ನ ಮಿತಿಗಳನ್ನೂ ಮಿರಿದ ಧ್ವನಿ ಪಡೆದುಕೊಳ್ಳುತ್ತದೆ.

ಕಥೆಗಳ ಮೇಲೆ ಬಹಳ ಪ್ರಭಾವ ಇರುವುದು ಜಾನಪದದಿಂದ ಜಾನಪದ ಕತೆಗಳನ್ನು ಬರಹಕ್ಕಿಳಿಸಿದಾಗ ತಮ್ಮ ಸತ್ವವನ್ನು ಕೆಲಮಟ್ಟಿಗೆ ಕಳೆದುಕೊಳ್ಳುತ್ತವೆಯಾದರೂ ಅವು ಭಾರತೀಯ ಪ್ರತಿಭೆಯ ಶ್ರೇಷ್ಠ ನಿದರ್ಶನಗಳಾಗಿವೆಯೆನ್ನುವುದನ್ನು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಜಾನಪದ ಸಾಹಿತ್ಯದ ಪ್ರಸ್ತುತತೆಯನ್ನು ಕುರಿತು "ಜಿ.ಎನ್.ದೇವಿ ಹೇಳುವ ಮಾತು ಹೀಗಿದೆ: 'ಭಾರತೀಯ ಸಾಹಿತ್ಯ ಕಳೆದ ಎರಡು ಶತಮಾನಗಳಲ್ಲಿ ಪಾಶ್ಚಾತ್ಯ ಮೂಲಕ 'prespective' ಕಲ್ಪನೆಯ ಭಾರದಲ್ಲಿ ನರಳಿದೆ. ಪಾಶ್ಚಾತ್ಯಜ್ಞಾನಮಾರ್ಗಗಳು ನಮ್ಮ ಜ್ಞಾನಮಾರ್ಗಗಳ ಸ್ಥಾನವನ್ನು ಆಕ್ರಮಿಸಿಕೊಂಡಿರುವುದರಿಂದ ಆದಿವಾಸಿ ಕಲ್ಪನೆಯೊಂದೇ ವಸಾಹತೀ ಚಿಂತನಾಕ್ರಮದಿಂದ ಮುಕ್ತವಾಗಿ ಉಳಿದಿವೆ"[೨] ಎಂಬ ಅಭಿಪ್ರಾಯಪಟ್ಟಿದ್ದಾರೆ. "ಭಾರತೀಯ ಕಥನಗಳ ಪಾರಂಪರಿಕ ಉದ್ದೇಶಗಳನ್ನು ವಿದ್ಯಾನಿವಾಸ ಮಿತ್ರ ಹೀಗೆ ವಿವರಿಸುತ್ತಾರೆ. ಅವರ ವ್ಯಾಖ್ಯಾನವನ್ನು ಜಿ.ಎಸ್.ಆಮೂರ ಅವರು ಕನ್ನಡ ಕಥನ ಸಾಹಿತ್ಯ ಸಣ್ಣ ಕಥೆ ಕೃತಿಯಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಿದ್ದಾರೆ.

೧. ಆಶಯ ಆಕೃತಿಗಳ ಸಾಂಗತ್ಯದ ಮೂಲಕ ಬದುಕಿನ ಸಮಗ್ರತೆಯ ದರ್ಶನ.

೨. ದೈಹಿಕ, ಮಾನಸಿಕ ಹಾಗೂ ವಾಚಕ ಕ್ರಿಯೆಗಳ ಏಕೀಕರಣದಿಂದ ಭಾಗಗಳನ್ನು ಇಡಿಯಾದುದರಲ್ಲಿ ಮತ್ತೆ ಸೇರಿಸುವುದು.

೩. ಮನುಷ್ಯನ ಸಮಸ್ಯೆಗಳಿಗೆ ಸಮುದಾಯದ ನೆಲೆಯಲ್ಲಿ ಹಾಗೂ ಸಮುದಾಯದ ಪ್ರಯತ್ನದಿಂದ ಪರಿಹಾರ ಕಂಡುಹಿಡಿಯುವುದು.

೪. ಸಂಸಾರದ ಸುಖದುಃಖಗಳಲ್ಲಿ ಆಸೆ, ಆದರ್ಶಗಳಲ್ಲಿ ತೊಡಗಿಸಿಕೊಂಡು ಮಾನವೀಯ ಸಂಬಂಧಗಳ ಚಿತ್ರಣಗಳ ಮೂಲಕ ಅವುಗಳನ್ನು ಮುಂದಿನ ಪೀಳಿಗೆಗೆ ತಲುಪಿಸಿ ಬಿಡುಗಡೆ ಪಡೆಯುವುದು.

ಕನ್ನಡದ ಸಣ್ಣಕತೆಗಾರರಿಗೆ ಇಷ್ಟುದೊಡ್ಡ ಪರಂಪರೆ ಬಳುವಳಿಯಾಗಿ ಬಂದಿರುವಾಗ ಅದನ್ನು ಅವರು ಅಲಕ್ಷಿಸಿರುವ ಸಾಧ್ಯತೆಯಿಲ್ಲ. ಮೊದಮೊದಲಿನ ಕತೆಗಾರರಂತೂ ಈ ನೆನಪುಗಳನ್ನು ಸ್ಪಷ್ಟವಾಗಿ ಉಳಿಸಿಕೊಂಡು ಬಂದರು. ಆನಂದಕಂದರು ಜಾನಪದ ಪರಂಪರೆಯನ್ನು ವಿವರಿಸುವುದು ಗಮನಾರ್ಹವಾದುದು. "ನಮ್ಮ ಜಾನಪದ ಪರಂಪರೆಯಲ್ಲಿ ಕಥೆಯ ಸಾಹಿತ್ಯ ರಾಶಿರಾಶಿಯಾಗಿ ಸಿಕ್ಕುವುದು. ಅಜ್ಜಿಕತೆಗಳನ್ನು ಮೊದಲು ಮಾಡಿ ವೇದಾಮತ ತತ್ವವನ್ನು ಬೋಧಿಸುವ ಪೌರಾಣಿಕ ಕಥೆಗಳವರೆಗೆ ಕಥಾಜಾತಿಯ ವಿವಿಧ ಸ್ವರೂಪಗಳು ಇದರಲ್ಲಿ ನೋಡಲು ದೊರೆಯುವುವು.

ವ್ಯಕ್ತಿವ್ಯಕ್ತಿಗಳ ಸ್ವಭಾವಗಳನ್ನು ಸಾಮಾನ್ಯ ಸಮಾಜ ಜೀವನವನ್ನು ಅಣಕಿಸಿ ತೋರಿಸುವ ಚುಟುಕು ಕತೆಗಳು ತ್ಯಾಗವೀರನನ್ನು, ಧರ್ಮವೀರರನ್ನು, ಯುದ್ಧವೀರರನ್ನು ಬಣ್ಣಿಸುವ ಪವಾಡ ಕತೆಗಳಲ್ಲಿ ಕಂಡುಬರುತ್ತದೆ. ಶೃಂಗಾರ ಸರಸಿಗಳಾದ ರಾಜರಾಣಿಯರ ಸರಸ–ರಂಜಕ ಕತೆಗಳೂ ಇರುವವು. ಇವುಗಳಲ್ಲಿಯ ಹಲವು ಕತೆಗಳು ಅರಳಿಕೆಯಲ್ಲಿ ಅಲ್ಲದೆ ಹೋದರು ಮೂಲ ಸ್ವರೂಪದಲ್ಲಿ ಆಧುನಿಕ ಸಣ್ಣಕತೆಗಳ ತಂತ್ರಕ್ಕೆ ಹೊಂದುವಂತಹ ಕತೆಗಳಾಗಿವೆ"[೧] ಎಂಬ ಅಭಿಪ್ರಾಯ ಉಲ್ಲೇಖಾರ್ಹವಾದುದು.

"ಸಣ್ಣಕಥನ" ಸಾಹಿತ್ಯದ ಒಂದು ಪ್ರಕಾರವಾದುದರಿಂದ ಕಥನ ಪ್ರಕಾರ ಕುರಿತು ಮೇಲಿನ ಕೆಲ ಮಾತುಗಳನ್ನು ಗಮನಿಸುವುದು ಸೂಕ್ತ, ಜೊತೆಗೆ ನೇರವಾಗಿ ಸಣ್ಣ ಕತೆಯ ಬಗ್ಗೆ ಬರುವುದಾದರೆ 'ಸಣ್ಣಕಥೆ' ಎಂಬ ಪದ ಪ್ರಯೋಗ ಇಂಗ್ಲಿಷಿನ Short storyಯ ಭಾಷಾಂತರವಾಗಿಯೇ ಕನ್ನಡದಲ್ಲಿ ಪ್ರಚಲಿತವಾಗಿದೆ. [ಮರಾಠಿಯಲ್ಲಿ ಸಣ್ಣಕತೆಯನ್ನು 'ಕಥಾ' ಎಂದೇ ಗುರುತಿಸಲಾಗುತ್ತದೆ. ಆದರೆ Short ಪದಕ್ಕೆ ಕೊಡುವ ಪ್ರಧಾನ ಅರ್ಥ ಹೀಗಿದೆ;

೧. ಸಣ್ಣ ಕತೆ ಸ್ಥಳ, ಕಾಲಗಳನ್ನು ತೀರಾ ಚಿಕ್ಕ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳಲಾಗುತ್ತದೆ.

೨. ಅದು ಅಪೇಕ್ಷಿತ ಅಥವಾ ನಿರೀಕ್ಷಿತ ಮಿತಿಗಳನ್ನು ತಲುಪುವುದಿಲ್ಲ ಹಾಗೂ ಅದು ಹೇಳುವುದು ಬಹಳ ಕಡಿಮೆ ಅಥವಾ ಸ್ವಲ್ಪದರಲ್ಲಿಯೇ ಅದು ಬಹಳಷ್ಟನ್ನು ಹೇಳುತ್ತದೆ.

"Short ಹಾಗೂ 'ಸಣ್ಣ' ಸಮಾನಾರ್ಥಕಗಳೆಂದು ಗ್ರಹಿಸಿ ಸಣ್ಣಕತೆಯ ಸಂದರ್ಭದಲ್ಲಿ ಸ್ವೀಕರಿಸಿದಾಗಲೂ 'ಸಣ್ಣ' ಎಂಬ ವಿಶೇಷಣ ಸಮಸ್ಯಾತ್ಮಕವಾಗಿಯೇ ಉಳಿಯುತ್ತದೆ ಎನ್ನುವುದನ್ನು ಒಪ್ಪಲೇಬೇಕು. What makes a short story short ಎಂಬ ಲೇಖನದಲ್ಲಿ ನಾರ್ಮನ್ ಫ್ರೀಡ್‌ಮನ್ ಸಣ್ಣಕತೆಯ ಮೀಮಾಂಸೆಯಲ್ಲಿ 'ಸಣ್ಣ'ತನವೇ (ಸಣ್ಣತನಕ್ಕೆ ಬೇರೆ ಅರ್ಥಗಳಿವೆ) ಮೂಲ ಸಮಸ್ಯೆ ಎಂದು ವಾದಿಸುವುದನ್ನು ಗಮನಿಸಬಹುದು"[೪]

ನಾರ್ಮನ್ ಫ್ರೀಡ್‌ಮನ್ ಅಭಿಪ್ರಾಯದಂತೆ ಸಣ್ಣಕತೆಯ ಈ ಸಣ್ಣತನಕ್ಕೆ ಎರಡು ಕಾರಣಗಳಿರುತ್ತವೆ. ಈ ಕತೆಯ ವಿಷಯದ ವ್ಯಾಪ್ತಿ ಚಿಕ್ಕದಾಗಿರಬಹುದು. ಉದ್ದೇಶಿತ ಪರಿಣಾಮಕ್ಕಾಗಿ ವಿಷಯವನ್ನು ಬೇಕೆಂದೇ ಚಿಕ್ಕದಾಗಿಸಿರಬಹುದು. ಮೊದಲನೆಯ ಕಾರಣದಲ್ಲಿ ವಸ್ತು ಮುಖ್ಯವಾದರೆ, ಎರಡನೆಯದರಲ್ಲಿ, ತಂತ್ರ ನಿರ್ಣಾಯಕವಾಗುತ್ತದೆ.

ಸಣ್ಣಕತೆಯನ್ನು ಒಂದು ಪ್ರತ್ಯೇಕ ಸಾಹಿತ್ಯ ಪ್ರಕಾರವಾಗಿ ಸ್ವೀಕರಿಸಬೇಕೇ ಎನ್ನುವ ವಿಷಯದಲ್ಲಿಯೂ ವಾದಗಳಿವೆ. ವ್ಯಾಲೆಂಶಾಳ ಪ್ರಕಾರ ಅದೊಂದು ಬೆರಿಕೆಯ ಸಾಹಿತ್ಯ ಪ್ರಕಾರ(Show 1983-16). ಈ ಹೇಳಿಕೆ ಕೂಡ ಫ್ರೀಡಮನನ ಹೇಳಿಕೆಗೆ ಹತ್ತಿರವಾಗಿ ನಿಲ್ಲುತ್ತದೆ ಹಾಗೂ ಸಮರ್ಥಿಸುತ್ತದೆ.

"ಸಣ್ಣಕತೆಯ ವಿಶಿಷ್ಟಗುಣಗಳಾದ ಮಿತವ್ಯಯ, ತೀವ್ರತೆ ಸ್ಪಷ್ಟತೆಗಳ ಮೂಲ 'ಸಣ್ಣತನ'ದಲ್ಲಿಯೇ ಇದೆ. ಕಾದಂಬರಿಗೆ ಹೋಲಿಸಿದರೆ ಸಣ್ಣಕತೆಯಲ್ಲಿ ಕ್ರಿಯೆ ಸೀಮಿತವಾಗಿರುತ್ತದೆ. ವಿ.ಎಸ್.ಪ್ರಿಚೆಟ್ ವಿವರಿಸುವಂತೆ ಕಾದಂಬರಿ ಎಲ್ಲವನ್ನು ಹೇಳುತ್ತದೆ. ಆದರೆ ಸಣ್ಣಕತೆ ಒಂದನ್ನು ಮಾತ್ರ ಹೇಳುತ್ತದೆ. ಆದರೆ ಹೇಳಿಕೆಯಲ್ಲಿ ತೀವ್ರತೆ ಇರುತ್ತದೆ [Bailey 2000:7]"[೫] ಎಂಬ ಅಭಿಪ್ರಾಯ ಗಮನಾರ್ಹವಾದುದು.

"ಸಣ್ಣಕತೆ ಒಂದು ಚಿತ್ರವಾಗಿರುತ್ತದೆ. ಅದರ ಹಿಂದೆ ಒಂದು ವಿಚಾರವಿರುತ್ತದೆ. ಅದು ತನ್ನ ವಿಷಯದ ಸತ್ಯವನ್ನು ನಿದರ್ಶಿಸುತ್ತೆ"[೬] ಎಂದು ಹೆನ್ರಿ ಜೇಮ್ಸ್ ಹೇಳುವುದು ಇದನ್ನೇ ಸೂಚಿಸುತ್ತದೆ. "ಸಣ್ಣಕತೆಯ ಬಗ್ಗೆ ಹೆಸರಾಂತ ಅಮೇರಿಕನ್ ಕತೆಗಾರ್ತಿ ಯುಡೋರ ವೆಲ್ಟಿಯೂ ಅಭಿಪ್ರಾಯದಲ್ಲಿ ಸಣ್ಣಕತೆಯ ಸಂವಿಧಾನವನ್ನು ನಿಯಂತ್ರಿಸುವ ಎರಡು ಆಶಯಗಳೆಂದರೆ;

೧. ಬದುಕು ಸಾವುಗಳ ವೈರುಧ್ಯ

೨. ಅನ್ವೇಷಣೆ ಅಥವಾ ಹುಡುಕಾಟ. ಅವರ ಅಭಿಪ್ರಾಯದಂತೆ ಜಗತ್ತಿನ ಎಲ್ಲ ಕತೆಗಳಲ್ಲೂ ಈ ಅಂಶಗಳು ಕಂಡುಬರುತ್ತವೆ"[೭] ಎಂದು ವ್ಯಾಖ್ಯಾನ ಮಾಡಿದ್ದಾರೆ.

ಸಣ್ಣಕತೆಯಲ್ಲಿ ಕಾಲಕ್ಕೆ ವಿಶೇಷವಾದ ಮಹತ್ವವಿದೆ, ಕಾರ್ತಜೂರ ಅದನ್ನು ಕಾಲದ ಜೊತೆಗೆ ನಡೆವ ಸ್ಪರ್ಧೆ ಎಂದೇ ಕರೆದಿದ್ದಾನೆ. ಸಣ್ಣಕತೆ ಹಾಗೂ ಕಾದಂಬರಿಗಳ ನಡುವಿನ ಅಂತರವನ್ನು ಗುರುತಿಸಲು ಕಾಲ ಒಂದು ಮಹತ್ವದ ಸೂಚಕವಾಗಿದೆ. ಕಾದಂಬರಿ ಎಪಿಕ್ ಪ್ರಕಾರಕ್ಕೆ ಹತ್ತಿರವಾದುದರಿಂದ ಅದು ವಾಸ್ತವಕಾಲವನ್ನು ಹೆಚ್ಚಿನ ಪ್ರಮಾಣದಲ್ಲಿ ಒಳಗೊಳ್ಳುತ್ತದೆ. ಮೇಲಿನ ಅಂಶಗಳನ್ನು ಗಮನಿಸಿದಾಗ ಸಣ್ಣಕತೆ ಭಾವಗೀತೆಗೆ ಸಮೀಪವಾದುದರಿಂದ ಅದು ನಿರ್ವಹಿಸುವ ವಾಸ್ತವ ಕಾಲ ಸೀಮಿತವಾಗಿರುತ್ತದೆ.

ಕಾದಂಬರಿಯನ್ನು ಫಿಲ್ಮ್‌ಗೆ ಹೋಲಿಸಿದಂತೆ ಸಣ್ಣಕತೆಯನ್ನು ಪೋಟೋಗ್ರಾಫ್‌ಗೆ ಹೋಲಿಸಲಾಗುತ್ತದೆ. ಕತೆಗಾರ ಆಯ್ದುಕೊಳ್ಳುವ ದೃಷ್ಟಿಕೋನವೇ ಈ ಕ್ರಮವನ್ನು ನಿರ್ಧರಿಸುತ್ತದೆಯಾದುದರಿಂದ ಕತೆಯಲ್ಲಿ ಅದರ ಸ್ವರೂಪವನ್ನು ವಿಶೇಷವಾಗಿ ಗಮನಿಸಬೇಕಾಗುತ್ತದೆ.

ಸಣ್ಣಕತೆಯ ಬಗ್ಗೆ ವಿವಿಧ ವಿದ್ವಾಂಸರು ಹೇಳಿದ ಅಂಶಗಳನ್ನು ಈ ರೀತಿ ಗಮನಿಸುವುದರ ಜೊತೆಗೆ ಈ ಪ್ರಕಾರವನ್ನು ಕುರಿತು ಕನ್ನಡದ ಲೇಖಕರ ಅಭಿಪ್ರಾಯಗಳನ್ನು ಗಮನಿಸಬಹುದಾಗಿದೆ. ಅಂದರೆ ಕನ್ನಡದಲ್ಲಿ ಕೂಡ ಈ ಪ್ರಕಾರದ ಬಗ್ಗೆ ತಕ್ಕಮಟ್ಟಿಗಿನ ಚರ್ಚೆ ನಡೆದಿರುವುದು ಕಂಡುಬರುತ್ತದೆ.

"ವರಕವಿ ಬೇಂದ್ರೆಯವರು ಬರೆದದ್ದು ಕೆಲವೇ ಕಥೆಗಳಾದರೂ ಕತೆಗಳ ಸ್ವರೂಪದ ಬಗ್ಗೆ ಈ ರೀತಿ ಹೇಳಿದ್ದಾರೆ: "ಸಣ್ಣಕತೆಗಳು ಭಾವಗೀತೆಗಳಿದ್ದಂತೆ ಎಂದು ಹೇಳುವವರು ಅವುಗಳ ಜೀವಕ್ಕೆ ಸಂಬಂಧಿಸಿದ್ದು ದೇಹಕ್ಕಲ್ಲ, ಅಂದರೆ ಭಾವಗೀತೆ ಪದ್ಯ, ಕತೆ, ಗದ್ಯ ಕತೆಗೆ ಸ್ವಯಂಬೂಶಕ್ತಿ ಇರುತ್ತದೆ. ಕತೆಗಾರ ಅದಕ್ಕೆ ಭಂಗ ತರಬಾರದು. ಕತೆಯ ಸ್ವಾಯತ್ತತೆಗೆ ಭಂಗ ಬರದಂತೆ ಕಥೆಗಾರನ ಪ್ರತಿಭೆ ದುಡಿಯಬೇಕು."[೮] "ಜೀವನದ ವಾಸ್ತವ ಹಾಗೆಯೇ ರಸವತ್ತಾದ ಚಿತ್ರಣಗಳನ್ನು ಕೊಡುವುದಷ್ಟೆ ನನ್ನ ಕೆಲಸ, ಎಂದು ಹೇಳಿದ ಮಾಸ್ತಿಯವರು ಸಣ್ಣಕತೆಯ ವಾಸ್ತವ ಆಯಾಮವನ್ನೇ ತೋರಿಸಿದರೂ ಬೇರೆ ಕತೆಗಾರರ ಕತೆಗಳಿಗೆ ಬರೆದ ಮುನ್ನುಡಿಗಳಲ್ಲಿಯೂ ಅವರು ಈ ಕತೆಗಳಲ್ಲಿ ನಾಡಿನ ಜನರ ಜೀವನ ಮೂಡಿ ಬಂದುದನ್ನೇ ಹೆಚ್ಚಾಗಿ ಮೆಚ್ಚಿಕೊಂಡರು.

ಕತೆಗಾರರಾಗಿ ತಮ್ಮ ಅನುಭವವನ್ನು ವಿವರಿಸುತ್ತಾ, ಅವರು ಕತೆಗಳಿಂದ ತಮಗೆ ದೊರೆತ ಆನಂದದ ಮೂಲ 'ಬೇರೆ ಜೀವನವನ್ನು ಅರಿತ ಅವರ ಜೊತೆ ಸೇರುವುದರಲ್ಲಿದೆ ಎಂದು ಹೇಳಿದರು."[೧೦]

ಬೇಂದ್ರೆಯವರು ಕಥೆಗಳನ್ನು ಭಾವಗೀತೆಗೆ ಹೋಲಿಸಿದರೆ ಚಿತ್ತಾಲರು ಸಣ್ಣಕತೆಗಳನ್ನು ಕಾವ್ಯಕ್ಕೆ ಹೋಲಿಸಿದ್ದಾರೆ. ಒಂದು ಕವನಕ್ಕೂ ಒಂದು ಸಣ್ಣ ಕತೆಗೂ ಮೂಲತಃ ಯಾವ ವ್ಯತ್ಯಾಸವು ಇಲ್ಲ. ವ್ಯತ್ಯಾಸವಿರುವುದು ಅವುಗಳ ಸಂಯೋಜನೆಯಲ್ಲಿ. ಸಾಧನದಲ್ಲಿ ನಿರೂಪಣಾ ಮಾರ್ಗದಲ್ಲಿ ಸಾಹಿತ್ಯದಲ್ಲಿ ಕಾವ್ಯ, ನಾಟಕ, ಕಾದಂಬರಿ ಮುಂತಾದ ಅನೇಕ ಪ್ರಕಾರಗಳಿದ್ದರೂ ಅವೆಲ್ಲಕ್ಕೂ ಸಾಮಾನ್ಯವಾದ ಗುಣ ಅತ್ಯಗತ್ಯ ಏಕೆಂದರೆ ಈ ಎಲ್ಲವೂ ಭಾಷೆಯ ಮೂಲಕ ಮೈತಳೆವ ಕಲಾಕರ್ಮಗಳು, ಕೃತಿಗಳು.

ಯು.ಆರ್.ಅನಂತಮೂರ್ತಿ ಕತೆಗಳನ್ನು ಎರಡು ವಿಧವಾಗಿ ನೋಡುತ್ತಾರೆ.

೧. ತಿಳಿಯೋ ಕತೆಗಳು

೨. ತಿಳಿಸೋ ಕತೆಗಳು

ಅಂದರೆ ಮೊದಲನೆಯದು ನವ್ಯ ಕತೆಯ ವಿಧಾನವಾದರೆ ಎರಡನೆಯದು ಮಾಸ್ತಿಯ ಸಂಪ್ರದಾಯದ ಕತೆ. ಇವರಲ್ಲದೆ ಇನ್ನೂ ಹಲವಾರು ಕನ್ನಡ ಕತೆಗಾರರು ಕತೆಯ ವಿಕಾಸದ ಬಗ್ಗೆ ತಮ್ಮದೇ ಆದ ವಿಚಾರಗಳನ್ನು ಮಂಡಿಸಿದ್ದಾರೆ.

ಸಣ್ಣಕತೆ ಭಾರತೀಯ ಪರಂಪರೆಯಲ್ಲಿ ಇಷ್ಟೆಲ್ಲಾ ನೆಲೆಯಿರುವುದನ್ನು ಗಮನಿಸಬಹುದು. ಜೊತೆಗೆ 'ಸಣ್ಣಕತೆ' ಎಂಬ ಶಬ್ದವೇ ಇಂಗ್ಲಿಷ್‌ನ 'Short story' ಎಂಬುದಾಗಿ ನೇರ ಭಾಷಾಂತರವಾಗಿರುವುದರಿಂದ ಈ ಪ್ರಕಾರ ಕೂಡ ಕಾದಂಬರಿಯಂತೆ ಯೂರೋಪ್ ಅದರಲ್ಲೂ ಇಂಗ್ಲೆಂಡಿನಿಂದ ಹೊಸದಾಗಿ ಬಂದ ಸಾಹಿತ್ಯ ಪ್ರಕಾರ ಎಂಬ ಮಾತನ್ನು ಅಲ್ಲಗಳೆಯುವಂತಿಲ್ಲ.

ಆಧುನಿಕ ಸಣ್ಣಕತೆಗಳ ವಸ್ತು ಮತ್ತು ತಂತ್ರಗಳ ದೃಷ್ಟಿಯಿಂದ ಈ ಗದ್ಯ ಕಥೆಗಳಿಗಿಂತ ಭಿನ್ನವಾಗಿದ್ದು ಪಶ್ಚಿಮದ ನೇರ ಪ್ರಭಾವದಿಂದ ಜನಿಸಿದ ಸಾಹಿತ್ಯ ಪ್ರಕಾರವಾಗಿದೆ.

ಎಡ್ಗರ್ ಆಲನ್ ಪೋ: ಇವರು ಅಮೇರಿಕಾದ ಸಣ್ಣಕತೆಗಳ ಜನಕರೆಂದೆನಿಸಿದ ಇವರು ಅಮೇರಿಕಾದ ದೇಶದವರು. ಇವರ ಅಭಿಪ್ರಾಯದಂತೆ ಸಣ್ಣಕತೆ ಎಂದರೆ ಅರ್ಧತಾಸಿನಿಂದ ಒಂದು ಅಥವಾ ಎರಡು ತಾಸುಗಳಲ್ಲಿ ಓದಿ ಮುಗಿಸಬಹುದಾದ ಗದ್ಯಾತ್ಮಕ ಕಥಾನಕ. ಈ ಹೇಳಿಕೆ ಕಥೆಯ ಬಾಹ್ಯ ಚೌಕಟ್ಟನ್ನು ಕುರಿತು ಮಾತ್ರ ಹೇಳುವಂತಿದೆ.

'ಸಾಮರ್‌ಸೆಟ್‌ಮಾಮ್' ಇವರ ಪ್ರಕಾರ ಕೂತಮಟ್ಟಿನಲ್ಲಿ ಓದಿ ಮುಗಿಸಬಹುದಾದ ಏಕೈಕ ಕಲ ಪರಿಣಾಮವುಳ್ಳ ಲಲಿತ ಸಾಹಿತ್ಯವೇ ಸಣ್ಣಕತೆ ಎನ್ನುತ್ತಾನೆ. ಸಣ್ಣಕತೆ ಆಕಾರದಲ್ಲಿ ಸಣ್ಣವಾಗಿರಬೇಕೆಂಬ ಅಭಿಪ್ರಾಯವನ್ನು 'ಇರ್ವಿಂಗ್' ಮಹಾಶಯ ಬಹಳ ಚೆನ್ನಾಗಿ ಹೇಳಿದ್ದಾರೆ. ಹಾಗೆಯೇ ಓಹೆನ್ರಿ, ಲಿಯೋಟಾಲ್‌ಸ್ಟಾಯ್, ಆಂಟನ್, ಚೆಕಾವ್, ಮೊಪಾಸ್ ಮುಂತಾದವರನ್ನು ಮಾದರಿಯಾಗಿ ಸ್ವೀಕರಿಸಿ ಆ ಪ್ರಭಾವದ ಮೂಲಕ ಇಂದು ಕನ್ನಡ ಸಾಹಿತ್ಯದಲ್ಲಿ ಸಣ್ಣಕತೆಯು ತನ್ನದೇ ಆದ ಛಾಪು ಮೂಡಿಸಿದೆ.

**ಕನ್ನಡದಲ್ಲಿ ಸಣ್ಣಕಥೆಯ ವಿಕಾಸ (ಬೆಳವಣಿಗೆ)**

ಆಧುನಿಕ ಸಾಹಿತ್ಯ ಕ್ಷೇತ್ರದ ಪ್ರಕಾರಗಳಲ್ಲಿ ಕಾದಂಬರಿಯನ್ನು ಬಿಟ್ಟರೆ ಸಣ್ಣಕತೆ ಪ್ರಮುಖ ಪ್ರಕಾರವಾಗಿ ಬೆಳೆದಿರುವುದನ್ನು ಕಾಣಬಹುದಾಗಿದೆ. ಕಾರಣವೇನೆಂದರೆ ಕೈಗಾರಿಕಾ ಕ್ರಾಂತಿಯನಂತರ ಸಮಯದ ಅಭಾವದ ಪರಿಣಾಮವಾಗಿ ದೀರ್ಘವಾದ ಮಹಾಕಾವ್ಯಗಳನ್ನು, ಕಾದಂಬರಿಗಳನ್ನು ಓದುವ ತಾಳ್ಮೆ ಕಡಿಮೆಯಾದ್ದರಿಂದ ಸಣ್ಣಕತೆ ಜನಪ್ರಿಯವಾಗಿ ಈ ಪ್ರಕಾರದಲ್ಲಿ ಸಾಹಿತ್ಯ ರಚನೆಗೆ ಹೆಚ್ಚು ಪ್ರೋತ್ಸಾಹ ದೊರೆಯಿತು.

ಆಧುನಿಕ ಕನ್ನಡದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ– ಬಂಡಾಯದ ಮುಖ್ಯ ಅಭಿವ್ಯಕ್ತಿಯಾಗಿರುವ ಈ ಪ್ರಕಾರ ದಿನದಿನಕ್ಕೂ ಹೊಸ ರೂಪ ಮತ್ತು ತಂತ್ರಗಳ ಅನ್ವೇಷಣಾ ಭೂಮಿಕೆಯಾಗಿದೆ. ಸಣ್ಣಕತೆ ಮತ್ತು ಕಾದಂಬರಿಗಳು ಸ್ವರೂಪದಲ್ಲಿ, ಪರಿಣಾಮದಲ್ಲಿ ಹೇಗೆ ಬೇರೆಯಾಗುತ್ತವೆ ಎಂಬುದಕ್ಕೆ ಸಣ್ಣಕತೆ ಸಾವಿನ ಸಂದೇಶ ತಲುಪಿಸುವವನ ಹಾಗೆ, ಕಾದಂಬರಿ ಮೆರವಣಿಗೆ ಹೊರಟ ಹಾಗೆ ಎಂದಿದೆ. ಆಧುನಿಕ ಕನ್ನಡ ಸಣ್ಣಕಥೆಗಳ ಚರಿತ್ರೆ, ಪಂಜೆಮಂಗೇಶರಾಯರಿಂದ ಪ್ರಾರಂಭವಾಯಿತೆನ್ನಬೇಕು. "ಭಾರತಶ್ರವಣೆ" ಕಮಲಾಪುರದ ಹೊಟೇಲಿನಲ್ಲಿ" 'ನನ್ನ ಚಿಕ್ಕತಾಯಿ', ಮುಂತಾದ ಕಥೆಗಳನ್ನು ಕ್ರಿ.ಶ. ೧೯೦೦ರಲ್ಲಿ ಪ್ರಕಟಿಸಿದರು. ಅವರು ಕಥೆಗಳ ವಸ್ತುಸಾಮಾಜಿಕ ಹಾಗೂ ಚಾರಿತ್ರಿಕ ಅಲ್ಲಿನ ಪಾತ್ರಗಳು ವೀರ ಮತ್ತು ಪ್ರೇಮಕ್ಕೆ ಆದರ್ಶ. ವೀರಮಣಿಯರು ಕಾಣಿಸಿಕೊಳ್ಳುವ ಅವರ ಕಥೆಗಳಲ್ಲಿ ಹಾಸ್ಯಕ್ಕೆ ಪ್ರಧಾನತೆ ಇದೆ. ಆಧುನಿಕ ಜಗತ್ತಿನ ಕಥಾ ಸಾಹಿತ್ಯವನ್ನು ಭಾರತೀಯ ಪರಂಪರೆಯ ಹಿನ್ನಲೆಯಲ್ಲಿ ವಿಕಾಸಗೊಳಿಸಿದ ಕೀರ್ತಿ 'ಮಾಸ್ತಿ'ಯವರಿಗೆ ಸಲ್ಲುತ್ತದೆ. ಆದ್ದರಿಂದ ಮಾಸ್ತಿಯವರು ಕನ್ನಡದ ಸಣ್ಣಕತೆಗಳ ಜನಕರೂ ಆಗಿದ್ದಾರೆ. ಅಲ್ಲದೆ ಅವರ ಕಥಾ ಜಗತ್ತು ವಿಪುಲವೂ, ವೈವಿಧ್ಯವೂ ಆಗಿದೆ.

ಒಟ್ಟು ನೂರು ಕಥೆಗಳಿದ್ದು, ಅವು ಹದಿನೈದು ಸಂಕಲನಗಳಲ್ಲಿ ಪ್ರಕಟಗೊಂಡಿವೆ. 'ಮಾಸ್ತಿ ಕನ್ನಡದ ಆಸ್ತಿ' ಎಂಬ ಮಾತು ಸಣ್ಣಕಥಾ ಕ್ಷೇತ್ರಕ್ಕಂತೂ ಅನ್ವರ್ಥವಾಗಿದೆ. ಹಾಗೂ

ಅವರ ವಿಶಿಷ್ಟ ಕಲೆಗಾರಿಕೆಗೆ ನಿದರ್ಶನವಾಗಿ 'ಮೊಸರಿನ ಮಂಗಮ್ಮ', 'ವೆಂಕಟಿಗನ ಹೆಂಡತಿ', 'ಕಲ್ಮಾಡಿಯ ಕೋಣ', 'ನಿಜಗಲ್ಲಿನರಾಣಿ' ಮುಂತಾದವನ್ನು ಹೆಸರಿಸಬಹುದು.

ಆರಂಭದಲ್ಲಿ ಸಣ್ಣಕತೆಗಳನ್ನು ಬರೆದ ಪಂಜೆ ಮಂಗೇಶರಾಯರ ಸಾಲಿಗೆ ಕೆರೂರು ವಾಸುದೇವಾಚಾರ್ಯರು, ಎಂ.ಎನ್.ಕಾಮತ್ ಮುಂತಾದವರು ಸೇರುತ್ತಾರೆ. ಅನಂತರ ಸಣ್ಣಕತೆಯ ಜನಕರೆಂದು ಖ್ಯಾತರಾದ ಶ್ರೀನಿವಾಸರನ್ನು ಬಿಟ್ಟರೆ ಪ್ರಮುಖ ಕಥೆಗಾರರಾಗಿ ಉಳಿಯುವುದು ಆನಂದ (ಅಜ್ಜಂಪುರ ಸೀತಾರಾಂ) "ಭವತಿ ಭಿಕ್ಷಾಂ ದೇಹಿ", "ನಾ ಕೊಂದ ಹುಡುಗಿ' ಮುಂತಾದ ಅವರ ಕಥೆಗಳನ್ನು ಗಮನಿಸಬಹುದು.

ಕುವೆಂಪುರವರ 'ಧನ್ವಂತರಿಯ ಚಿಕಿತ್ಸೆ' ಇಂದಿಗೂ ಸಹ ರೈತರ ಸಮಸ್ಯೆಗಳ ದ್ಯೋತಕದಂತಿದೆ. ಕೋಡೆಕಲ್ ಶ್ರೀನಿವಾಸರ "ಧನಿಯರ ಸತ್ಯನಾರಾಯಣ' ಪ್ರಗತಿಶೀಲ ಕಥೆಗಾರರಲ್ಲಿ ನಿರಂಜನ, ಬಸವರಾಜಕಟ್ಟಿಮನಿ, ಚದುರಂಗ ಮುಂತಾದವು ಸ್ವಾತಂತ್ರ್ಯ ನಂತರದ ಜೀವನ ಶೈಲಿಯನ್ನು ಬಿಂಬಿಸುವ ಕತೆಗಳನ್ನು ರಚಿಸಿದ್ದಾರೆ. "ಶವದ ಮನೆ' ಚದುರಂಗರ ಪ್ರಸಿದ್ಧ ಕತೆ. ಅಂದಿನ ರಾಜಕೀಯ ಬೆಳವಣಿಗೆಯ ಪರಿಣಾಮವನ್ನು ತೋರುವಂಥಾದ್ದು.

ಬೆಂಗಳೂರು ಮಹಾನಗರಗಳಲ್ಲಿ ಅಮಾಯಕರು ಒಳಗಾಗುವ ಶೋಷಣೆಯ ಚಿತ್ರಣ ಕೊಡುವ 'ಕೊನೆಯ ಗಿರಾಕಿ' ನಿರಂಜನರ ಯಶಸ್ವಿ ಕತೆಗಳಲ್ಲಿ ಒಂದು. ಅ.ನ.ಕೃ ಅವರ ಸಂಪಾದಿಸಿದ 'ಕಾಮನಬಿಲ್ಲು' ಪ್ರಗತಿಶೀಲ ಮನೋಧರ್ಮದ ಕತೆಗಳನ್ನು ಒಳಗೊಂಡಿದೆ. ಕಾವ್ಯದಂತೆ ಸಣ್ಣಕತೆಗಳಲ್ಲಿ 'ನವ್ಯ' ತಂತ್ರ ಮತ್ತು ಮನೋಧರ್ಮದಲ್ಲಿ ವ್ಯಕ್ತವಾಗುವ ಅಂಶ. ಹೊಸದನಿ ಹೊಸ ತುಡಿತ ಕೇಳಿ ಬಂದದ್ದು ನವ್ಯತೆಯಲ್ಲಿ ಅಡಿಗರ ಕಾವ್ಯದಲ್ಲಿ ಕಂಡುಬರುವ ಈ ಅಂಶ ನವ್ಯ ಕತೆಗಳಲ್ಲಿ ಇನ್ನೂ ಕಲಾತ್ಮಕವಾಗಿ ಕಂಡುಬಂದವು.

ವ್ಯಕ್ತಿ ಕೇಂದ್ರವಾದ ನವ್ಯದಲ್ಲಿ ಅಂತರಂಗ ತುಡಿತ ದ್ವಂದ್ವಗಳು, ವ್ಯಕ್ತಿ ಮತ್ತು ಪರಿಸರದ ನಡುವಿನ ಬಿರುಕು, ವ್ಯಕ್ತಿಯ ಏಕಾಂಗಿ ಭಾವ, ಪರಕೀಯತೆ, ಅನಾಥಪ್ರಜ್ಞೆ, ಕಾಮದ ಒಳತೋಟಗಳು, ಅತೃಪ್ತಿ ಭಾವ, ವಿಷಾದಭಾವಗಳು, ನವ್ಯಕತೆಗಳಿಗೆ ಚೌಕಟ್ಟು ಒದಗಿಸಿದ ಅಂಶಗಳು.

ಫ್ರಾಯ್ಡನ ಮನೋವೈಜ್ಞಾನಿಕ ವಿಚಾರ, ಮಾನವನ ಮನೋಜಗತ್ತಿನ ದರ್ಶನ ಒದಗಿಸಿತು. ಸಂಕೀರ್ಣವೂ ವರ್ಣಮಯವೂ ಆದ ಮನೋಜಗತ್ತನ್ನು ಕುರಿತು

ಬರೆಯುವಾಗ ಭಾಷೆ, ವಸ್ತು, ತಂತ್ರಗಳು ಸಂಕೀರ್ಣವಾಗುವುದು ಅನಿವಾರ್ಯವಾಯಿತು. ಸಂಕೇತ, ಪ್ರತಿಮಾರೂಪಗಳು ಜನ್ಮತಾಳಿದವು.

ಆಲನಹಳ್ಳಿ ಶ್ರೀಕೃಷ್ಣ ಅವರ ಫಿನಿಕ್ಸ್ ಅನಂತಮೂರ್ತಿಯವರ "ಬೋಜರಾಜ" "ಮೌನಿ", "ಸೂರ್ಯನ ಕುದುರೆ" "ಪ್ರಶ್ನೆ"ಗಳನ್ನು ಉದಾಹರಿಸಬಹುದು. ಸುಮಾರು ೧೯೫೦ ರಿಂದ ಎರಡು ದಶಕಗಳಲ್ಲಿ ನವ್ಯಕತೆ, ನವ್ಯಕಾವ್ಯ, ನವ್ಯಕಾದಂಬರಿಗಳು ರಚಿತವಾದವು. ಬಿ.ಸಿ.ರಾಮಚಂದ್ರಶರ್ಮರ "ಏಳನೆಯ ಜೀವ", ಅನಂತಮೂರ್ತಿ ಅವರ "ಎಂದೆಂದೂ ಮುಗಿಯದ ಕತೆ", ಯಶವಂತ ಚಿತ್ತಾಲರ "ಬೇನ್ಯಾ" ಕಥೆಯಾದಳು ಹುಡುಗಿ', ಶಾಂತಿನಾಥದೇಸಾಯಿಯವರ 'ಕ್ಷಿತಿಜ', 'ಕೂರ್ಮಾವತಾರ', ಪಿ.ಲಂಕೇಶ್ ಅವರ 'ನಾನಲ್ಲ', 'ಉಮಪತಿಯ ಸ್ಕಾಲರ್‌ಶಿಫ್. ಯಾತ್ರೆ, 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ', ಪೂರ್ಣಚಂದ್ರ ತೇಜಸ್ವಿಯವರ 'ಸ್ವರೂಪ' ಇವು ಪ್ರಮುಖ ಕೃತಿಗಳು. ರಾಜಲಕ್ಷ್ಮಿ (ಸಂಗಮ), ವೀಣಾ ಶಾಂತೇಶ್ವರ (ಮುಳ್ಳುಗಳು) ಲೇಖಕಿಯರು ಈ ವರ್ಗದಲ್ಲಿದ್ದಾರೆ.

"ಬಂಡಾಯ ಚಳವಳಿ ಕಾವ್ಯ ಪ್ರಧಾನವೆಂಬಂತೆ ಕಂಡರೂ, ಕತೆ ಕಾದಂಬರಿಗಳು ಹೊಸ ಸತ್ವದಿಂದ ಕೂಡಿದ್ದವು. ಶಿಕ್ಷಣ ಪಡೆದ ಗ್ರಾಮೀಣ ಕೆಳವರ್ಗದ ಲೇಖಕರು, ಕತೆ-ಕಾದಂಬರಿಗಳನ್ನು ಪ್ರಕಟಿಸುತ್ತಿರುವರು"[೧೧] ಆಧುನಿಕ ಕನ್ನಡದ ಮೊದಲ ದಲಿತ ಕಥಾ ಸಂಕಲನಗಳನ್ನು ಪ್ರಕಟಿಸಿದ ಕತೆಗಾರರು ಬೆರಳೆಣಿಕೆಯಷ್ಟು ಇದ್ದರೂ ಬಿಡಿಕತೆಗಳನ್ನು ಬರೆದವರು ಹಲವಾರು ಜನರಿದ್ದಾರೆ. (ನೋಡಿ: ದಲಿತ ಕತೆಗಳ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು) ಹೆಚ್ಚಿನ ಬಿಡಿ ಕತೆಗಳ ಬರಹಗಾರರು ಆರಂಭದಲ್ಲಿ ಸಂಕಲನಗಳನ್ನು ಪ್ರಕಟಿಸಿದರೂ ಕೆಲವರು ಈಗ ಸ್ಥಗಿತಗೊಂಡಿದ್ದಾರೆ. ಕೆಲವರು ವೈಚಾರಿಕ ಬರಹದ ಕ್ಷೇತ್ರವನ್ನು ಪ್ರವೇಶ ಮಾಡಿದ್ದಾರೆ. ಕಥಾ ಸಂಕಲನವನ್ನು ಪ್ರಕಟಿಸಿದ ಕಥೆಗಾರರ ಹೆಸರುಗಳನ್ನು ಈ ರೀತಿಯಲ್ಲಿ ಗುರುತಿಸಬಹುದಾಗಿದೆ.

ಚನ್ನಣ ವಾಲೀಕಾರರ ಕುತ್ತದಲಿ ಕುದ್ದವರ ಕತೆಗಳು, ದೇವನೂರ ಮಹಾದೇವ ಅವರ ದ್ಯಾವನೂರು, ಅರವಿಂದ ಮಾಲಗತ್ತಿ ಅವರ ಮುಗಿಯದ ಕತೆಗಳು, ಮ.ನ.ಜವರಯ್ಯ ಅವರ ಬುರುಡೆಗೆ ಸ್ವರ್ಗ, ಮೊಗಳ್ಳಿ ಗಣೇಶ್ ಅವರ ಬುಗುರಿ, ಭೂಮಿ ಎಂಬ ಪ್ರಸಿದ್ಧ ಸಂಕಲನಗಳು ರಚನೆಯಾಗಿವೆ. ಜನಾರ್ಧನ ಎರ್ಪಾಕಟ್ಟೆ, ಪ್ರಕ್ರಿಯೆ, ತಿರಸ್ಕೃತರು, ಭದ್ರಯ್ಯ ತಿಮ್ಮಸಂದ್ರ – ಬಾಗಿಲ ಬೀಗ ಮತ್ತು ರೇಣು, ಎಚ್.ಬಾಲರಾಜು, ಸೂರ್ಯ ಕತ್ತಲು ಬೆಳಕು, ಹೊಮಗಳ್ಳಿ ಸೋಮಣ್ಣ, ತಮಟೆ, ನಟರಾಜ ಹುಳಿಯಾರ್ ಅವರು ಮತ್ತೊಬ್ಬ ಸರ್ವಾಧಿಕಾರಿ ಇನ್ನೂ ಮುಂತಾದವರನ್ನು ಹೆಸರಿಸಬಹುದು.

ಇತ್ತೀಚಿನ ಸಣ್ಣಕತೆ ರಚನೆಯಲ್ಲಿ ಕಥೆಗಾರ್ತಿಯರ ಕಾರ್ಯ ಮಹತ್ತರವಾದುದು. ವೈದೇಹಿ, ಕಮಲಾಹಮ್ಮಿಗೆ, ಹೇಮಾಪಟ್ಟಣಶೆಟ್ಟಿ, ನೇಮಿಚಂದ್ರ ಅಲ್ಲದೆ ಸಾ.ರಾ. ಅಬೂಬಕ್ಕರ್, ಬಾನುಮುಷ್ತಾಕ್, ಗೀತಾನಾಗಭೂಷಣ, ಮುಂತಾದ ಹಿಂದೂ, ಮುಸ್ಲಿಂ ಸಂವೇದನೆಯ ಕಥೆಗಾರ್ತಿಯರನ್ನು ಸಹ ಗಮನಿಸಬಹುದು. ಹೀಗೆ ಕನ್ನಡ ಸಣ್ಣಕತೆ ಪ್ರಬುದ್ಧವಾಗಿ ಬೆಳೆದು ನಿಂತಿದೆ.

ಈ ನಿಟ್ಟಿನಲ್ಲಿ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ವೈವಿಧ್ಯಮಯವಾದ ಸಾಹಿತ್ಯ ಪಂಥಗಳು ಕಂಡುಬಂದು ಅವರು ಹಲವು ಸಾಹಿತ್ಯ ಪ್ರಕಾರಗಳಲ್ಲಿ ಸಣ್ಣಕಥೆಗೆ ಒಂದು ಸೂಕ್ಷ್ಮತೆ ಇರುವುದು ತುಂಬಾ ಮುಖ್ಯವಾದ ಅಂಶವಾಗಿದೆ. ಇದು ನಮ್ಮ ಜನಪದರ ಗಾದೆಯಂತೆ ವಿಶಾಲವಾದ ಅರ್ಥವನ್ನು ಧ್ವನಿಸುವಂತಹದ್ದು. ಆದ್ದರಿಂದ ಸಣ್ಣಕಥೆ ಕನ್ನಡ ಸಾಹಿತ್ಯದಲ್ಲಿ ಹೆಚ್ಚು ಪ್ರಭಾವಶಾಲಿಯಾದುದು. ಎಪ್ಪತ್ತು-ಎಂಭತ್ತರ ದಶಕದಲ್ಲಿ ಮೂಡಿಬಂದ ಕಥೆಗಳು ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಸಂಚಲನವನ್ನು ಉಂಟುಮಾಡಿದವು ಮತ್ತು ಕನ್ನಡಕ್ಕೆ ಹೊಸ ಬಗೆಯ ರಕ್ತ-ಮಾಂಸಗಳನ್ನು ತುಂಬಿದವು.

ದಲಿತ ಕಥಾ ಸಾಹಿತ್ಯದ ಸಂದರ್ಭದಲ್ಲಿ ದಲಿತ ಬದುಕಿನ ಹಿನ್ನಲೆಯಿಂದ ಬಂದ ಕಥೆಗಾರರು ಸ್ವತಃ ಅನುಭವಿಸಿದ ಶೋಷಣೆ, ಅಪಮಾನ, ಮೇಲ್ವರ್ಗದವರ ದಬ್ಬಾಳಿಕೆ, ಕ್ರೌರ್ಯಗಳನ್ನು ಹಸಿಹಸಿಯಾಗಿ ನಿರೂಪಿಸುವಂತಹ ಶಕ್ತಿ ಈ ಕಥೆಗಾರರಿಗಿದೆ. ದಲಿತ ಕಥಾ ಸಾಹಿತ್ಯದ ಶ್ರೇಷ್ಠ ಕಥೆಗಾರರಾಗಿ ಗುರುತಿಸಲ್ಪಡುವ ಮೊಗಳ್ಳಿ ಗಣೇಶ್ ಅವರ ಕಥೆಗಳು ಬದುಕಿಗೆ ಹತ್ತಿರವಾಗಿರುತ್ತವೆ. ಇವರು ಕಥೆಗಳು ಕಟ್ಟಿಕೊಡುವಂತಹ ದಲಿತ ಜನರ ನೋವು, ಹತಾಶೆ, ಬಡತನ ಹಾಗೂ ಅವರ ಮೇಲಾಗುವ ಅಪಮಾನ, ಶೋಷಣೆ, ದೌರ್ಜನ್ಯ ಮುಂತಾದವುಗಳು ಸಹಜವಾಗಿ ಕಂಡುಬಂದಿದ್ದು ನಿಜಕ್ಕೂ ಅಧ್ಯಯನ ಯೋಗ್ಯವಾದುದು.

## ಅಡಿಟಿಪ್ಪಣಿಗಳು

೧. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪು.ಸಂ.೨

೨. ಅದೇ,

೩. ಅದೇ, ಪು.ಸಂ. ೨೧

೪. ಅದೇ

೫. ಅದೇ, ಪು.ಸಂ. ೨೨

೬. ಅದೇ,

೭. ಅದೇ,

೮. ಅದೇ

೯. ಅದೇ, ಪು. ೨೩

೧೦. ಅದೇ,

೧೧. ಅರವಿಂದ ಮಾಲಗತ್ತಿ(ಸಂ.), ದಲಿತಮಾರ್ಗ, ಪು.ಸಂ. ಪ್ರಸ್ತಾವನೆ – ೩.

*****

# ಅಧ್ಯಾಯ ಮೂರು

# ಮೊಗಳ್ಳಿ ಅವರ ಬದುಕು ಮತ್ತು ಬರಹ

ಮೊಗಳ್ಳಿ ಗಣೇಶ್ ಅವರ ಕಥೆಗಳು ಕನ್ನಡ ಸಾಹಿತ್ಯಕ್ಕೆ ಬಲು ಅಪರೂಪದ ಕೊಡುಗೆಯನ್ನು ನೀಡಿವೆ. ಪ್ರಜ್ಞೆಯುಳ್ಳ ತಾಯ್ತನದ ಸಂಸ್ಕೃತಿಯನ್ನು ರೂಪಿಸುವುದು ಅವರ ಬರೆಹಕ್ಕೆ ಹೆಗ್ಗುರುತಾಗಿ ಗ್ರಾಮೀಣ ಬದುಕಿನಲ್ಲಿಯೇ ಬೆಳೆದು ಬಂದ ಗ್ರಾಮ್ಯಜೀವನದ ಬದುಕಿನ ಬವಣೆಗಳನ್ನು ತೀರ ಹತ್ತಿರದಿಂದ ಅನುಭವಿಸಿದವರಿಂದ ಮಾತ್ರ ಇಂತಹ ಸಂವೇದನೆಗಳು ಸೃಷ್ಟಿಗೊಳಿಸಲು ಸಾಧ್ಯ. ಇವರು ನಮ್ಮ ಯುವ ತಲೆಮಾರಿನ ಸತ್ವಶಾಲಿಯಾದ ಪ್ರಖ್ಯಾತ ಕತೆಗಾರರಾಗಿದ್ದಾರೆ. ಕನ್ನಡ ಕಥಾಲೋಕ ಕಂಡ ವಿಶಿಷ್ಟವಾದ ಪ್ರತಿಭೆ ಹಾಗೂ ಅವರ ಕತೆಗಳು ಕಲಾತ್ಮಕತೆಯ ಅಭಿವ್ಯಕ್ತಿ ಸಂವೇದನೆಯ ದೃಷ್ಟಿಯಿಂದ ಗಮನಸೆಳೆಯುತ್ತವೆ.

ಮೊಗಳ್ಳಿಯವರು ಕಟ್ಟಿಕೊಡುವ ಪರಂಪರೆಯ ಸಂಸ್ಕೃತಿಯ ಜೀವನ ಬೆರಗುಗೊಳಿಸುವಂಥದ್ದು. ಇವರ ಕುಟುಂಬದ ವಾತಾವರಣವೇ ಕಥೆಗಳ ಸರಪಳಿಯಂತೆ ಕಂಡ ತವರೂರಾಗಿತ್ತು. ಅವರು ಅನುಭವಿಸಿದ ನೋವು, ಕಂಡ ಹಿಂಸೆ, ಶೋಷಣೆಗಳು ಬರೆಯುವ ತುಡಿತವನ್ನು ಅಧಿಕಗೊಳಿಸಿವೆ. ಗ್ರಾಮೀಣ ಬದುಕಿನೊಂದಿಗೆ ಬೆಳೆದುಬಂದ ಮೊಗಳ್ಳಿಯವರ ಬರಹ ಮತ್ತು ಬದುಕು ಇದರ ಬಗ್ಗೆ ಸಂಕ್ಷಿಪ್ತವಾಗಿ ಪರಿಚಯಿಸುವುದು ಇಲ್ಲಿನ ಆಶಯವಾಗಿದೆ.

ಮೊಗಳ್ಳಿ ಗಣೇಶ್ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಂತೆ ಮೊಗೇನಹಳ್ಳಿಯಲ್ಲಿ ೧೯೬೨ರಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದಿಂದ ಅರ್ಥಶಾಸ್ತ್ರ ಹಾಗೂ ಜಾನಪದ ವಿಷಯಗಳಲ್ಲಿ ಎಂ.ಎ. ಪದವಿ ಪಡೆದು ಕನ್ನಡ ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಪದವಿಯನ್ನು ಪಡೆದುಕೊಂಡಿದ್ದಾರೆ. ಇವರ ಸತ್ವಶಾಲಿಯಾದ ಬರೆಹದಿಂದ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಅವರು ಬರೆದ ಮೊದಲ ಕಥೆ'ಒಂದು ಹಳೇ ಚಡ್ಡಿ' ಅದು ಪ್ರಕಟವಾದದ್ದು ೧೯೮೯ರಲ್ಲಿ ಪ್ರಜಾವಾಣಿಯ ದೀಪಾವಳಿ ಕಥಾಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆಯುವ ಮೂಲಕ ಅಂದಿನಿಂದ ಅವರ ಕಥೆಗಳ ಪಯಣ ನಡೆಯುತ್ತಿದೆ.

ಬುಗುರಿ ೧೯೯೨, ಅತ್ತೆ ೧೯೯೭ ಭೂಮಿ ೨೦೦೧ ಮಣ್ಣು ೨೦೦೫ ಈ ನಾಲ್ಕು ಕಥಾಸಂಕಲನಗಳು ಸೇರಿ ಮೊಗಳ್ಳಿ ಕಥೆಗಳು ೨೦೦೮, ಕನ್ನೆಮಳೆ ೨೦೧೧

ಕಥಾಸಂಕಲನಗಳು, ತೊಟ್ಟಿಲು ೨೦೦೫, ಕಿರೀಟ ೨೦೦೭, ಅನಾದಿ ೨೦೦೮ ಕಾದಂಬರಿಗಳು, ಸೂರ್ಯನ ಬಚ್ಚಡಬಹುದೆ ೨೦೦೧, ದೇವ ಸ್ಮಶಾನ ೨೦೦೮, ಕವನ ಸಂಕಲನಗಳನ್ನು ರಚಿಸಿದ್ದಾರೆ. ದೇಶಿ ೧೯೯೭, ಸೊಲ್ಲು ೧೯೯೮, ದಲಿತ ಕಥನ ೨೦೦೬ ಮೌಖಿಕ ಕಥನ ೨೦೦೭ ನಡುಗನ್ನಡದ ಕನ್ನಡನಾಡು ೨೦೦೮, ತಕರಾರು ೨೦೦೮, ಅವ್ಯಕ್ತ ಚರಿತ್ರೆ ೨೦೧೦ ಮುಂತಾದ ವಿಚಾರ ಮತ್ತು ವಿಮರ್ಶಾ ಬರಹಗಳನ್ನು ಪ್ರಕಟಿಸಿದ್ದಾರೆ.

ಮೊಗಳ್ಳಿ ಗಣೇಶ್ ಅವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆಗೆ ಹಲವು ಪ್ರಶಸ್ತಿ, ಗೌರವಗಳು ಲಭಿಸಿವೆ. ಪು.ತಿ.ನ. ಕಾವ್ಯ ಪ್ರಶಸ್ತಿ, ಕಾವ್ಯಾನಂದ ಪ್ರಶಸ್ತಿ, ವರ್ಧಮಾನ ಸಾಹಿತ್ಯ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ, ರಾಜ್ಯ ಯಕ್ಷಗಾನ ಜಾನಪದ ಅಕಾಡೆಮಿ ಪ್ರಶಸ್ತಿ, ಮುದ್ದಣ್ಣ ರತ್ನಾಕರವರ್ಣಿ ಪ್ರಶಸ್ತಿ, ಯು.ಆರ್.ಅನಂತಮೂರ್ತಿ ಪ್ರಶಸ್ತಿ, ಬಿ.ಎಸ್.ಶ್ರೀಧರ್ ಸಾಹಿತ್ಯ ಪ್ರಶಸ್ತಿ, ದೆಹಲಿಯ ರಾಷ್ಟ್ರೀಯ ಕಥಾಪ್ರಶಸ್ತಿ, ಸಂಸ್ಕೃತಿ ಪ್ರತಿಷ್ಠಾನ್ ಸಾಹಿತ್ಯ ಪ್ರಶಸ್ತಿಗಳು ಲಭಿಸಿವೆ. ಸ್ವೀಡಿಸ್ ಅಕಾಡೆಮಿ ಹಾಗೂ ಜರ್ಮನ್ ಸಾಹಿತ್ಯ ಸಂಸ್ಥೆಗಳ ಒಕ್ಕೂಟ ಪ್ರಕಟಿಸಿರುವ ಆಧುನಿಕ ಭಾರತೀಯ ಸಾಹಿತ್ಯ ಸಂಪುಟಗಳಲ್ಲಿ ಇವರ ಕಥೆಗಳು ಸೇರಿವೆ ಹಾಗೂ ಇಂಗ್ಲಿಷ್ ಸ್ಪ್ಯಾನಿಷ್ ಭಾಷೆಗೆ ಇವರ ಕೃತಿಗಳು ಅನುವಾದವಾಗಿವೆ. ದೆಹಲಿ ವಿಶ್ವವಿದ್ಯಾನಿಲಯದ ಇಂಗ್ಲಿಷ್ ವಿಭಾಗದ ಇಂಡಿಯನ್ ಶಾರ್ಟ್‌ಸ್ಟೋರಿಸ್ (Short stories) ಕೃತಿಯಲ್ಲಿ ಇವರ 'ಒಂದು ಹಳೇ ಚಡ್ಡಿ' ಕತೆ ಸೇರಿಕೊಂಡು ಪಠ್ಯವಾಗಿದೆ.

ನೊಬೆಲ್ ಪ್ರಶಸ್ತಿಯನ್ನು ನೀಡುವ ಸ್ವಿಡೀಸ್ ಅಕಾಡೆಮಿಯು ಪ್ರಕಟಿಸಿರುವ 'ಆಧುನಿಕ ಭಾರತೀಯ ಸಣ್ಣ ಕಥೆಗಳು' ಕೃತಿಯಲ್ಲಿ ಸೇರಿಕೊಂಡಿರುವ ಕನ್ನಡದ ಏಕೈಕ ಕಥೆ ಎಂದರೆ ಇವರ 'ಬತ್ತ' ಕಥೆ ಎಂಬುದು ಇನ್ನೊಂದು ಹೆಗ್ಗಳಿಕೆ. ತಮಿಳು ಭಾಷೆಯಲ್ಲಿ ಇವರ ಪ್ರಾತಿನಿಧಿಕ ಕಥೆಗಳ ಸಂಕಲನ ಪ್ರಕಟವಾಗಿದ್ದು, 'ತೊಟ್ಟಿಲು' ಕಾದಂಬರಿ ತಮಿಳಿಗೆ ಅನುವಾದಗೊಂಡಿದೆ. ಇಡೀ ಕಾದಂಬರಿ ಕ್ಯಾಲಿಫೋರ್ನಿಯ ಯುನಿವರ್ಸಿಟಿಯ ಸಾಹಿತ್ಯ ಅನುವಾದ ಯೋಜನೆಯಡಿ ಇಂಗ್ಲಿಷಿಗೆ ಭಾಷಾಂತರಗೊಂಡಿರುವುದು ವಿಶೇಷವಾಗಿದೆ. ಅಲ್ಲದೆ ಇವರ ಕಥೆಗಳು ಇಂಗ್ಲಿಷಿನ ಜೊತೆಗೆ ಇತರ ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ.

೨೦೦೭ರಲ್ಲಿ ಜರ್ಮನಿಯ ಅತಿಥಿ ಲೇಖಕರಾಗಿ ಆಹ್ವಾನಿತರಾಗುವ ಮೂಲಕ ಅಪರೂಪದ ಮನ್ನಣೆಗೂ ಪಾತ್ರರಾಗಿದ್ದಾರೆ. ಪ್ರಸ್ತುತ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿ ಮತ್ತು ವರನಟ ಡಾ. ರಾಜ್‌ಕುಮಾರ್ ಅಧ್ಯಯನ ಪೀಠದ ನಿರ್ದೇಶಕರಾಗಿ ಮೊಗಳ್ಳಿ ಗಣೇಶ್ ಅವರು ಕಾರ್ಯನಿರ್ವಹಿಸುತ್ತಿದ್ದಾರೆ.

# ಅಧ್ಯಾಯ ನಾಲ್ಕು
# ಮೊಗಳ್ಳಿ ಅವರ ಕಥೆಗಳಲ್ಲಿನ ಕೌಟುಂಬಿಕ ನೆಲೆಗಳು

## ೧.೧. ಹಸಿವು ಮತ್ತು ಬಡತನ

ದಲಿತ ಸಮಾಜದ ಹಸಿವನ್ನು ನೀಗಿಸುವ ವಸ್ತು, ವಿಷಯಗಳನ್ನು ಮೊಗಳ್ಳಿ ಗಣೇಶ್ ಅವರ ಕಥೆಗಳಲ್ಲಿ ನೋಡಬಹುದು. ದಲಿತರ ಹಸಿವು ಕೇವಲ ದಲಿತರ ಹಸಿವು ಅಲ್ಲ, ಇದು ಎಷ್ಟೋ ಶೋಷಿತ ಸಮುದಾಯದ ಹಸಿವೆಂದು ಪರಿಭಾವಿಸುವುದು ಬಹಳ ಮುಖ್ಯವಾದ ಅಂಶವಾಗಿದೆ.

ಮೊಗಳ್ಳಿ ಅವರ 'ಬತ್ತ' ಕಥೆಯಲ್ಲಿ ಶೋಷಿತವರ್ಗ ಹಲವು ವರ್ಷಗಳಲ್ಲಿ ಕಾಣದಿದ್ದ 'ಬತ್ತ'ವನ್ನು ಕಾಣುವ, ಅದರಿಂದ ಹಸಿವನ್ನು ನೀಗಿಸಿಕೊಳ್ಳುವ ವಾತಾವರಣ ಗಮನಾರ್ಹವಾದದ್ದು. ದಲಿತ ಕೇರಿಯಲ್ಲಿ ತಮ್ಮ ಬಹುದಿನದ ಬಯಕೆಯನ್ನು ಈಡೇರಿಸಿಕೊಳ್ಳುವಂತಹ ಆಶಾದಾಯಕ ಹಬ್ಬವನ್ನು ಆಚರಿಸುತ್ತೇವೆ ಎಂಬ ಮನೋಭಾವನೆ ದಲಿತರಲ್ಲಿ ಕಂಡುಬರುತ್ತದೆ.

ಸಿದ್ದಲಿಂಗಯ್ಯ ಅವರ 'ನನ್ನ ಜನಗಳು' ಎಂಬ ಕಾವ್ಯ ದಲಿತರ ಶ್ರಮ, ಸಹನೆ, ತಾಳ್ಮೆಯ ಬಗ್ಗೆ ಹೇಳುತ್ತದೆ. ಕವಿತೆಯ ಪ್ರತಿಯೊಂದು ಪದಪುಂಜವು ಕೂಡ ದೀನ ದಲಿತರ ಬೆವರಿನ ಮಿಡಿತವಾಗಿದೆ. ಹಾಗೆಯೇ 'ಬತ್ತ' ಕಥೆಯಲ್ಲಿ ಹೊಲೆಯರು ಬತ್ತವನ್ನು ಕೊಯ್ಯುವುದು, ಅದನ್ನು ಒಗ್ಗೂಡಿಸಿ ಇದರಲ್ಲಿ ಸ್ವಲ್ಪವನ್ನು ತಮ್ಮದಾಗಿಸಿಕೊಳ್ಳಲು ಬಿಡದ ಮೇಲ್ಜಾತಿಯ ವರ್ಗ, ಅಧಿಕಾರಿಶಾಹಿಯ ಅಮಾನವೀಯ ಅಂಶಗಳನ್ನು ಕಥೆಗಾರರು ಮುಖಾಮುಖಿಗೊಳಿಸಿದ್ದಾರೆ. ದಲಿತರು ಬೆಳಗಾಗುವುದನ್ನೇ ಕಾಯುತ್ತಿದ್ದು ತಮ್ಮ ಹಸಿದ ಒಡಲಿಗೆ ಅನ್ನವನ್ನು ಕಾಣಲು ಹಾತೊರೆಯುತ್ತಾರೆ.

'ಬತ್ತ'ವನ್ನು ತಮ್ಮ ಕುಡುಗೋಲು ತೆಗೆದುಕೊಂಡು ಒಂದೆಡೆ ರಾಶಿಹಾಕಿ ಇನ್ನೇನೊ ಬತ್ತವೆಂಬ ಮಾಯಾಂಗನೆ ಮನೆ ಸೇರುತ್ತಾಳೆ ಎನ್ನುವಷ್ಟರಲ್ಲಿ ಗದ್ದೆಯ ಮಾಲೀಕ, ಜಿಲ್ಲಾಧಿಕಾರಿ, ಇನ್ಸ್‌ಪೆಕ್ಟರ್‌ಗಳ ಆಗಮನದಿಂದಾಗಿ ಹಸಿದ ಹೊಟ್ಟೆಗೆ ಬರೆ ಹಾಕಿದಂತಾಗುತ್ತದೆ. ಅದಕ್ಕೂ ಮುಂಚೆ ಇವರು ಬತ್ತವನ್ನು ಕದ್ದು ಮನೆಗೆ ಸಾಗಿಸುವುದು ಹಸಿವನ್ನು ನೀಗಿಸಿಕೊಳ್ಳಲು ಮಾಡಿದ ಕೃತ್ಯವಾಗಿರುತ್ತದೆಯೇ ಹೊರತು, ಕಳ್ಳತನವಾಗಿರುವುದಿಲ್ಲ.

ಹಸಿವನ್ನು ದೂರ ಮಾಡುವ ಬಗೆಯದ್ದು, ಇಂತಹ ಸ್ಥಿತಿ ಇವರಿಗೆ ಇದ್ದು ಬಂದ ದಾರಿದ್ರ್ಯ ಸ್ಥಿತಿಯಲ್ಲ, ಇಲ್ಲದೆಯೇ ಬಂದಂತಹ ಸ್ಥಿತಿಯಾಗಿದೆ. ತಮ್ಮ ದುಡಿತಕ್ಕೆ ಸರಿಯಾದ

ಪ್ರತಿಫಲವನ್ನು ಕೊಡದೆ, ಮಾನವೀಯ ಅಂತಃಕರಣವಿಲ್ಲದೆ, ಶ್ರಮದ ಫಲಪೇಕ್ಷೆಯನ್ನು ನೀಡದ ಅಂಶ ದಲಿತ ಎಂಬ ಕೇಂದ್ರ ಪಂಥಿಯನ್ನು ಮೀರಿ, ಒಟ್ಟು ದಮನಕ್ಕೊಳಪಟ್ಟ ಜನಸಮುದಾಯದ ದನಿಗಳಾಗಿ ವಿಸ್ತಾರವನ್ನು ಪಡೆದುಕೊಳ್ಳುತ್ತದೆ.

ಇಲ್ಲಿ ಕಥೆಗಾರರು ಹಸಿವನ್ನು ನೀಗಿಸಿಕೊಳ್ಳಲು ಮಾಡಿದ ಹೋರಾಟವನ್ನು ಸಮರ್ಥವಾಗಿ ಅಭಿವ್ಯಕ್ತಪಡಿಸಿದ್ದಾರೆ. ಭೂಮಾಲೀಕತ್ವ ಮೇಲ್ವರ್ಗದವರ ಹಿಡಿತದಲ್ಲಿರು-ವುದರಿಂದ ಹಸಿವನ್ನು ನೀಗಿಸಿಕೊಳ್ಳಲು ದಲಿತರು ಅನುಸರಿಸಿದ ತಂತ್ರ ಅವರ ಜೀವನೋತ್ಸಾಹವನ್ನು ಕಥೆ ಸ್ಪಷ್ಟಪಡಿಸುತ್ತದೆ. **'ಬಾಳು'** ಕಥೆಯಲ್ಲಿ ಗ್ರಾಮೀಣ ಜನರ ಜೀವನದ ಸ್ಥಿತಿ ಚಿತ್ರಣಗೊಂಡಿದೆ. ಕಥೆಯಲ್ಲಿ ಬರುವ 'ಮಾರೆ' ಮದುವೆಯಾಗಿದ್ದರೂ, ತನ್ನ ಗಂಡನನ್ನು ಬಿಟ್ಟು ತವರು ಮನೆಯಲ್ಲಿ ಜೀವನ ನಡೆಸುತ್ತಾಳೆ. ತನ್ನ ತಮ್ಮ ಮತ್ತು ತಂಗಿಯರನ್ನು ಸಾಕಲು ಹಲವಾರು ಸವಾಲುಗಳಿಗೆ ಮುಖಾಮುಖಿಯಾಗುವುದು ಅನಿವಾರ್ಯವಾಗುತ್ತದೆ. ಬದುಕಿನ ಬಡತನದ ಬವಣೆಯನ್ನು ನೀಗಿಸಿಕೊಳ್ಳಲು ಮೈಮಾರಿಕೊಳ್ಳುವ ಸ್ಥಿತಿ ಅವಳಿಗೆ ಬಂದೊದುಗುವುದು ಸಾಮಾಜಿಕ ದುರಂತರದ ಸ್ಥಿತಿಗೆ ಕನ್ನಡಿ ಹಿಡಿದಂತಿದೆ.

ಧಣಿಗಳ ಹೊಲದಲ್ಲಿ ತನ್ನ ತಮ್ಮನೊಡನೆ ಕಡಲೆಕಾಯಿ ಬಿಡಿಸಲು ಕೆಲಸಕ್ಕೆ ಹೋದಾಗ ಕಡಲೆಕಾಯಿಯನ್ನು ಬಿಡಿಸುತ್ತಲೆ, ಕದ್ದು ತಿನ್ನುವ ಪ್ರಕ್ರಿಯೆ ನಡೆಯುತ್ತದೆ. ಅಕ್ಕ ಮತ್ತು ತಮ್ಮ ಮಾತ್ರವಲ್ಲದೆ ಇತರೆ ಕೂಲಿ ಹುಡುಗರು ಕಡಲೆಕಾಯಿಯನ್ನು ಕದ್ದು ತಿನ್ನುವುದು ಮತ್ತು ಸಾಗಿಸುವುದು ಶತಶತಮಾನಗಳಿಂದ ದಲಿತರನ್ನು ಮುತ್ತಿಕೊಂಡು ಬಂದಿರುವ ಹಸಿವು ಮತ್ತು ಬಡತನವನ್ನು ಸೂಚಿಸುತ್ತದೆ. ಕೆಲಸ ಮುಗಿದ ಮೇಲೆ ದೊಡ್ಡವರು ಆಳುಗಳನ್ನು ಪರಿಶೀಲಿಸುವ ಘಟನೆ ಹೃದಯವಿದ್ರಾವಕವಾಗಿದೆ. ಕೆಲವು ಹುಡುಗರು ಒಂದಿಷ್ಟು ಕಡಲೆಕಾಯಿಯನ್ನು ಹಳೆಯ ಟವಲ್‌ಗಳಿಗೆ ಸೇರಿಸಿ ಅದನ್ನು ತಲೆ ಪೇಟಾವಾಗಿ ಸುತ್ತಿಕೊಂಡು 'ನೋಡ್ಕಳ್ರಪ್ಪೋ ಎಲ್ಲವುಸ್ಕಂದಿದ್ದೆವು ಅನ್ನುದಾ..... ನಾವಂತ ಕಳ್ರಲ್ಲ ಕನ್‌ಬಿಡ್ರಪ್ಪಾ"[೧] ಎಂದು ಎದ್ದು ನಿಲ್ಲುವುದು ದಲಿತರ ಚಾಣಾಕ್ಷತನಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ.

'ಮಾರೆ'ಯ ರವಿಕೆಯ ತುದಿಯಲ್ಲಿ ಇರುವ ಒಂದು ಕಡಲೆಕಾಯಿ ಬೀಜವನ್ನು ಗಮನಿಸಿದ ಧಣಿಯ ಕಡೆಯವರು, ಅವಳ ಕಡೆ ಗಹನವಾಗಿ ದಿಟ್ಟಿಸಿನೋಡಿ ಅವಳ ರವಿಕೆಯನ್ನು ಪಟಾರ್ ಎಂದು ಕೀಳುವುದು ಅಮಾನವೀಯ ಘಟನೆಯಾಗುತ್ತದೆ. ಎಳೆದ ರಭಸಕ್ಕೆ ಭೂಮಿಯ ಮೇಲೆಲ್ಲಾ ಕಡಲೆಕಾಯಿಯ ಬೀಜಗಳು ಚೆಲ್ಲಾಡುತ್ತವೆ, ಹೊಲದ ಮಾಲೀಕ ಅವಳನ್ನು ಜರಿದು ಅವಮಾನಿಸುವ ಕೃತ್ಯ ನಡೆಯುತ್ತದೆ. ಹಸಿವನ್ನು

ನೀಗಿಸಿಕೊಳ್ಳಲು ಇವಳು ಕಡಲೆಕಾಯಿ ಕದಿಯುವ ಅನಿವಾರ್ಯತೆಗೆ ಒಳಗಾಗಿ ಸಾಮಾಜಿಕವಾಗಿ ಅಪಮಾನಕ್ಕೆ ಗುರಿಯಾಗುತ್ತಾಳೆ.

ಈ ಪ್ರಸಂಗ ದೇವನೂರು ಮಹಾದೇವ ಅವರ 'ಒಡಲಾಳ' ಕಾದಂಬರಿಯಲ್ಲಿ ಗುರುಸಿದ್ದ ಕಡಲೆಕಾಯಿಯನ್ನು ಕದಿಯುವುದು, ಅದನ್ನೆಲ್ಲಾ ಸಾಕವ್ವನ ಕುಟುಂಬ ತಿಂದು ಜೀರ್ಣಿಸಿಕೊಳ್ಳುವ ಪ್ರಸಂಗವನ್ನು ನೆನಪಿಗೆ ತರುತ್ತದೆ. ಕತೆಯ ಕೊನೆಯಲ್ಲಿ 'ಮಾರೆ'ಯ ಅಕ್ರಮ ಸಂಬಂಧಗಳನ್ನು ತಿಳಿದ ಆಕೆಯ ತಮ್ಮ ಅದನ್ನು ಪ್ರತಿಭಟಿಸುವುದು ಸಹಜವಾದುದಾಗಿದೆ. ಇದರಿಂದ ನೊಂದ ಅವಳ ನಿಗೂಢವೆಂಬಂತೆ ಕಣ್ಮರೆಯಾಗುವ ವಿಶಿಷ್ಟತಂತ್ರದೊಡನೆ ಕತೆ ಮುಕ್ತಾಯವಾಗುತ್ತದೆ. ಈ ಘಟನೆ ಬದುಕನ್ನು ಹರಸಿ ಹೊರಟು ಕಣ್ಮರೆಯಾಗಿ ಕನವರಿಸಿದ ಎಷ್ಟೊ ದಲಿತ ಜೀವಗಳ ಧಾರುಣತೆಗೆ ಸಾಕ್ಷಿಭೂತವಾಗಿ ನಿಲ್ಲುತ್ತದೆ.

**'ಬಾಡೂಟ'** ಕಥೆಯಲ್ಲಿ 'ರಾಜ'ನ ತಾತಾನು ಪೇಟೆಗೆ ಹೋಗಿ 'ಎಳನೀರು ಮತ್ತು ತೆಂಗಿನಕಾಯಿಗಳನ್ನು ಸಾಬರ ಬಳಿ ಮಾರಾಟ ಮಾಡಿ ಇಡಿ ಮನೆಮಂದಿಗೆಲ್ಲ ಗಂಜಿಯನ್ನು ಕಾಣಿಸಿ ಬದುಕುದರಲ್ಲಿ ಸ್ವರ್ಗವನ್ನು ಕಾಣುತ್ತಿರುತ್ತಾನೆ. ನಲವತ್ತು ವರ್ಷಗಳ ಕಾಲ ನಿರಂತರವಾಗಿ, ತನ್ನೆಲ್ಲ ಶಕ್ತಿ ಮೀರಿ ಬಡತನವನ್ನು ಸುಧಾರಿಸಲು ಹರಸಾಹಸಪಡುತ್ತಾ, ಹಸಿವಿನೊಂದಿಗೆ ಗುದ್ದಾಡುತ್ತಾ, ಜೀವನ ಚಕ್ರವನ್ನು ಸವೆಸುತ್ತಿರುತ್ತಾನೆ.

ಈತನ ಮಗನಾದ ರುದ್ರನಿಗೆ ಇಬ್ಬರು ಹೆಂಡತಿಯರು ಮೊದಲ ಹೆಂಡತಿ ಸಾವಿಗೀಡಾದ ಮೇಲೆ, ಎರಡನೇ ಹೆಂಡತಿಯಾದ ಮಾದೇವಿಯು ಈತನ ಕುಟುಂಬದ ಹೆಗಲನ್ನು ಹೊರುತ್ತಾಳೆ. ಹಿರಿಹೆಂಡತಿ ಮಗಳಾದ 'ಸಾಕಿ'ಯು ಎಲ್ಲ ಕಷ್ಟದ ನಡುವೆಯು ತವರು ಮನೆಗೆ ಬಂದಿದ್ದಳು. ತನ್ನ ತಾಯಿ ಇದ್ದಿದರೆ ಏನೆಲ್ಲ ಸೌಕರ್ಯಗಳನ್ನು ಮಾಡುತ್ತಿದಳೋ ಎಂದು ಕಲ್ಪಿಸಿ ವೇದನೆಯಿಂದ ಹಳೆಯ ಘಟನೆಗಳನ್ನು ಮೆಲುಕುತ್ತಾ ಮಲತಾಯಿಯ ಮೇಲೆ ರೇಗಾಡುತ್ತಿದ್ದಳು. ಇವರಿಬ್ಬರು ಒಂದಿಲ್ಲೊಂದು ಕಾರಣಕ್ಕಾಗಿ ಬಿಗುಮಾನದಿಂದ ದಿನವಿಡಿ ಕಲಹವಾಗುವುದನ್ನು ಕತೆ ವಿಶಿಷ್ಟವಾಗಿ ಅಭಿವ್ಯಕ್ತಿಸುತ್ತದೆ.

ಪೇಟೆಗೆ ಹೋಗಿದ್ದ ರಾಜನು ತನಗಾಗಿ ಚಿಕ್ಕವ್ವ ಬಾಡಿನ ಸಾರನ್ನು ಎತ್ತಿಡುತ್ತಾಳೆಂದು, ಅವಳ ಬಗ್ಗೆ ಪ್ರೀತಿಯಿಂದ ನೆನೆದುಕೊಳ್ಳುವುದು ಸಹಜವಾದುದು. ಮನೆಯಲ್ಲಿ ವಾರಗಿತ್ತಿಯರು, ಮಾದೇವಿಯ ಪರವಾಗಿ ಮಾತನಾಡಲು ಅಳುಕುತ್ತಾ, ಸಾಕಿಯ ಪರವಾಗಿಯು ಏನನ್ನು ಹೇಳಲಾರದೆ ಹಸಿಯುವ ಹೊಟ್ಟೆ ಕಡೆಗೆ ಗಮನಹರಿಸುತ್ತಾರೆ. ಬಾಡಿನ ತುಂಡಿನ ಜೊತೆಗೆ ರೊಟ್ಟಿಯ ಚೂರುಗಳು ಬಂದು ನಮ್ಮನ್ನು ಸ್ವರ್ಗಕ್ಕೆ

ಕರೆದೊಯ್ಯುತ್ತವೆ ಎಂದು ಸಣ್ಣ ಮಕ್ಕಳೆಲ್ಲ ಮಾದೇವಿಯ ಸುತ್ತ ಕೋಳಿ ಮರಿಗಳಂತೆ ಸುತ್ತಿಕೊಳ್ಳುವ ಹಸಿವಿನ ದೃಶ್ಯ ಕರುಣಜನಕವಾಗಿದೆ.

ಅವರೆಲ್ಲರ ನೀರಾಡುವ ಬಾಯಿಗಳಿಗೆ ಸಮವಾಗಿ ರೊಟ್ಟಿ ಬಾಡು ಹಂಚಿ ಸರಿದೂಗಿಸಲು ಅವಳಿಗೆ ದಿನವಿಡಿ ಸಾಕಾಗಿ ಹೋಗುತ್ತಿತ್ತು. ಇದು ಹಸಿವಿನ ಕಬಂಧ ಬಾಹುಗಳು ದಲಿತ ಕುಟುಂಬವನ್ನು ಆವರಿಸಿರುವುದನ್ನು ಸೂಚಿಸುತ್ತದೆ. ಮಾಂಸದ ತುಂಡುಗಳು ಇಡೀ ಘಟನೆಯಲ್ಲಿ ಅವಿತುಕೊಂಡಿದ್ದು, ಅವರವರು ಹೊಟ್ಟೆಕಿಚ್ಚಿನ ಹಸಿವಿನಲ್ಲಿ ಕರಗುತ್ತಾ ಜೀವನದ ಕಹಿಯಂತೆ ವಿಷವಾಗುತ್ತಿರುವಂತಿತ್ತು.

ಸಾಕಿ ಮತ್ತು ಮಾದೇವಿಯ ಕಲಹದಲ್ಲಿ ಇವರಿಬ್ಬರ ಕಾದಾಟವನ್ನು ನೋಡಿ ರುದ್ರನು ಗಮನಿಸಿ, ಮಾದೇವಿಯ ಮೇಲೆ ರೋಷಭರಿತನಾಗಿ ಇಡೀ ಕೇರಿಗೆ ಧ್ವನಿಸುವಂತೆ ಅಬ್ಬರಿಸುವುದು ಕಥೆಯ ತಂತ್ರಗಾರಿಕೆ ದೃಷ್ಠಿಯಿಂದ ಮುಖ್ಯವಾಗುತ್ತದೆ. "ಯಾವ ಹೆಣ್ಣು, ಯಾವ ಗಂಡಿನ ಸಿರಿ ಮಂಚಕ್ಕೂ ಬರಬಾರದೆಂಬ ವ್ಯಾಕುಲದಲ್ಲಿ ಮಾದೇವಿ ತನ್ನ ವೇದನೆಯನ್ನು ಬಿಚ್ಚಿಡುತ್ತಾಳೆ".[೨] ಕಥೆಯು ಅಂತಿಮದಲ್ಲಿ ಸಂಸಾರದುದ್ದಕ್ಕೂ ನೋವುಂಡು, ನಿಭಾಹಿಸಲಾರದೆ ಸಾವಿಗೆ ಶರಣಾಗುವುದರ ಮೂಲಕ ಘಟನೆ ಅಂತ್ಯಗೊಳ್ಳುತ್ತದೆ.

**'ಕಾಳಿ'** ಕಥೆಯ ಕಾಳಿ ಪಾತ್ರವು ದಲಿತ ಕುಟುಂಬದಲ್ಲಿ ಬದುಕಿನ ಜವಾಬ್ದಾರಿತನವನ್ನು, ಗಟ್ಟಿತನದಿಂದ ನಿರ್ವಹಿಸುವ ಔದಾರ್ಯ ಗುಣವನ್ನು ಪ್ರಕಟಪಡಿಸುತ್ತದೆ. ಗೌಡರ ಹಟ್ಟಿಯಲ್ಲಿ ಕಸ ಸುರಿಯುವ ಕಾಯಕದಲ್ಲಿ ಕಾಳಿ ನಿರತಳಾಗಿರುತ್ತಾಳೆ. ಎಷ್ಟೋ ಜನ ದುಡಿಮೆಯನ್ನು ಮಾಡಿಸಿಕೊಂಡು ಅನ್ನವನ್ನು ನೀಡುತ್ತಿರಲಿಲ್ಲ. ಕೆಲವರು ಕಾಳಿಯ ಕೆಲಸದ ಏಕಾಗ್ರತೆಯನ್ನು ನೋಡಿ ತಂಗಳು ಕೊಡುತ್ತಿದ್ದರು. ಮಾರ್ಲಾಮಿಯ ಹಬ್ಬದಂದು ಅಳಿದುಳಿದ ಗೊಜ್ಜು, ಪಲ್ಯ, ತಾಳ್ದಾ, ಪಾಯಸ, ಅನ್ನ, ಹಿಟ್ಟು ಇವುಗಳನ್ನು ಹಿಂದೆ ಯಾವಾಗಲೋ ಕೊಟ್ಟಿದಕ್ಕೆ ಲೆಕ್ಕಹಾಕಿಸಿಕೊಂಡು ಕೆಲಸವನ್ನು ಮಾಡಿಸಿಕೊಳ್ಳುವುದು ಅಮಾನವೀಯವಾಗಿದೆ.

"ಮೇಕೆ ಮಾಂಸದ ಸಾರೇನಾದ್ರು ಅದೃಷ್ಟವಶಾತ್ ಒಂದು ಅರ್ಧ ಸೌಟಿನಷ್ಟಾದ್ರು ಸಿಕ್ಕಿದೆಂದರೆ, ಅದೆ ಅವರಿಗೆ ಹಬ್ಬದ ಭೋಜನವೆನ್ನಿಸುತ್ತಿತ್ತು"[೩] ಎಂಬುದು ಹಸಿವಿನ ಭೀಕರತೆಯನ್ನು ಸ್ಪಷ್ಟಪಡಿಸುತ್ತದೆ. ಕಥೆಗೆ ಪೂರಕವಾಗಿ ಇವರದೆ ಕಥೆಯಾದ "ಬಾಡೂಟ"ದಲ್ಲಿ ಮಾದೇವಿಯ ಕುಟುಂಬ ಮಾಂಸಕ್ಕಾಗಿ ಹಪಹಪಿಸುವ ಸಂದರ್ಭವನ್ನು ಕಾಣುತ್ತೇವೆ. ಇಲ್ಲೆಲ್ಲಾ ಹಸಿವಿನ ನಾನಾ ನೆಲೆಗಳು ಶಕ್ತಿಯುತವಾಗಿ ಪ್ರಕಟಗೊಂಡಿವೆ. ಕಾಳಿಯ ಸಂಸಾರಕ್ಕೆ ಮಾಂಸದ ರುಚಿಸಿಗುವಂತಿದ್ದರೆ ಸಾಯುವತನಕ ನಿಯತ್ತಿನಿಂದ ದೊಡ್ಡವರು ಮನೆಗಳಲ್ಲಿ ಜೀತಾ ಮಾಡಲು ನಾನು ಸಿದ್ದ ಎಂದು ಈಕೆಯ ಮಗ ಮನಸ್ಸಿನಲ್ಲಿ

ತೀರ್ಮಾನಿಸುವುದು, ಹಸಿವು ಮನುಷ್ಯನನ್ನು ಎಂತಹ ಹೀನಾಯ ಸ್ಥಿತಿಗೆ ಕೊಂಡೊಯ್ಯುತ್ತದೆ ಎಂಬುವುದನ್ನು ಸ್ಪಷ್ಟಪಡಿಸುತ್ತದೆ. ಒಂದು ಮೂಳೆಯ ಚೂರಿಗಾಗಿ, ಒಂದು ತುತ್ತಿನ ಕೃಪೆಗಾಗಿ, ಕನಿಕರದ ನೋಟಕ್ಕಾಗಿ ಅವರು ಮುಂದೆ ಎಷ್ಟೆಲ್ಲ ವಿನಿತವಾಗಿ ತಲೆಬಾಗಲು ಅಣಿಯಾಗುವೆ ಎಂದು ಕಾಳಪ್ಪ ತನ್ನ ಹಸಿವಿನ ನೋವನ್ನು ತೋಡಿಕೊಳ್ಳುತ್ತಾನೆ.

ಕಥೆಯ ಅಂತ್ಯದಲ್ಲಿ ಕಾಳಿಯ ಆತ್ಮಸ್ಥೈರ್ಯ ತನ್ನ ಕುಟುಂಬವನ್ನು ಕಟ್ಟಿಕೊಳ್ಳುವುದಕ್ಕಾಗಿ ಸ್ವಾಭಿಮಾನದ ಸುಳಿಯಲ್ಲಿ ದಾರಿದ್ರ್ಯತನವನ್ನು ಹೋಗಲಾಡಿಸಬೇಕೆಂಬ ಹಠಮಾರಿತನ, ಜೀವನ ಪ್ರೀತಿಯನ್ನು ಸೂಚಿಸುತ್ತದೆ. ಜೀವನದ ಆರಂಭದಿಂದ ಮುಕ್ತಾಯದವರಿಗೂ ಆಕೆ, ಕುಟುಂಬ ತೀವ್ರವಾದ ಬಡತನವನ್ನು ಹೋಗಲಾಡಿಸಲು, ಧಣಿಗಳ ಮನೆಯಲ್ಲಿ ಕಸಗುಡಿಸುವ ಕಾಯಕಕ್ಕೆ ಹೊಂದಿಕೊಂಡು ಪ್ರಮಾಣಬದ್ಧವಾಗಿ ಕಾಯಕಕ್ಕೆ ಹೊಂದಿಕೊಂಡು ಪ್ರಮಾಣಬದ್ಧವಾಗಿ ಸ್ವಾಭಿಮಾನದ ಅಡಿಯಲ್ಲಿ ಜೀವಿಸುತ್ತಾ ಕಣ್ಮರೆಯಾಗುತ್ತಾಳೆ.

'ಮಾದರಿ' ಕಥೆಯಲ್ಲಿ ಲೇಖಕರು 'ಮೋಚಿ' ಎಂಬ ಪಾತ್ರದ ಕಾಯಕದ ಪ್ರಸಂಗವನ್ನು ಸಮಾಜಕ್ಕೆ ತೆರೆದಿಡುತ್ತಾರೆ. ಕಥೆಯ ಪ್ರಾರಂಭದಲ್ಲಿ ಬಿಸಿಲು ಹೊಳೆಯುತ್ತಿತ್ತು. ರಸ್ತೆಗಳು ಅನೇಕ ಚಕ್ರಗಳಿಂದ ಸವೆಯುತ್ತಿದ್ದವು. ಆಗಲೇ ಜನ ಗಡಿಬಿಡಿಯ ಜಾಡಿನಲ್ಲಿ ಓಡಾಡುತ್ತಿದ್ದರು. ಮಕ್ಕಳು ಚೆಂದದ ಬಣ್ಣದ ಬಟ್ಟೆಗಳಿಂದ ಶಾಲೆಗಳ ಕಡೆ ಯಾಂತ್ರಿಕವಾಗಿ ನಡೆಯುತ್ತಿದ್ದರು. ವ್ಯಾಪಾರಿ ಅಂಗಡಿಗಳು ಜನಸಾಗರದಲ್ಲಿ ಬೀಗಲು ಸಡಗರ ಪಡುತ್ತಿದ್ದವು. ವಾಹನಗಳ ಹೊಗೆ, ಧೂಳು ವಾಸನೆ ಸುತ್ತೆಲ್ಲ ವ್ಯಾಪಿಸುತ್ತಿತ್ತು. ರಸ್ತೆ ಬದಿಯ ಚಾ ಅಂಗಡಿಗಳು ಬಾರ್ ಅಂಡ್ ರೆಸ್ಟೋರೆಂಟ್‌ಗಳು ವಿವಿಧ ಭಕ್ಷ್ಯಗಳ ಆಕರ್ಷಣೆಯಿಂದ ಹಾದಿಬೀದಿಯ ಜನರನ್ನು ಕೂಗಾಡುತ್ತಿದ್ದರು. ಇಂತಹ ಸಂದರ್ಭದಲ್ಲಿ ಮೋಚಿಯ ಕಾಯಕದ ಜೊತೆಗೆ ಅವನ ಜೀವನದ ಏಳುಬೀಳುಗಳನ್ನು ಬಹಳ ಸಂವೇದನಶೀಲರಾಗಿ ಮಾನವೀಯ ಅಂತಃಕರಣದಿಂದ ಬಹಳ ಪ್ರಜ್ಞಾಪೂರಕವಾಗಿ ಅವನ ಬದುಕನ್ನು ಅನಾವರಣಗೊಳಿಸುತ್ತಾರೆ. ಕಥೆಯು ಆರಂಭವಾಗುವುದು ನಗರದ ಯಾಂತ್ರಿಕ ಪರಿಸರ ಒಳಗೊಂಡಂತೆ ಮತ್ತು ಅಲ್ಲಿನ ಜೀವನವನ್ನು ತಿಳಿಸುತ್ತಾ ಮರದಡಿ ಕಂಡುಬರುವ 'ಮೋಚಿ' ಹಳೆಯ ಅರಿದ ಶೂಗಳಿಗೆ ಮರು ಜೀವಕೊಡುತ್ತಾನೆ. ಆದರೆ ತನ್ನ ಜೀವನಕ್ಕೆ ಯಾವ ಮರು ಜೀವನವನ್ನು ಕೊಡದೆ ಸಂವೇದನಾ ಮೂರ್ತಿಯಾಗಿ ಕಂಡುಬರುತ್ತಾನೆ. ಕಥೆಗಾರರು ತಮ್ಮ ಜನಾಂಗದ ಒಳಗೆ ಹಲವು ಬೇರುಗಳಾಗಿ ಬೆಳೆದು ಶೋಷಣೆಗಾಗಿ ಪೂರಕವಾಗಿಯೇ ಕಂಡುಬರುತ್ತವೆ ಎಂಬುದನ್ನು ಆತಂಕದಲ್ಲಿ ತಿಳಿಸುತ್ತಾರೆ. ನಿವೇದಕರು ಮೋಚಿಯೊಂದಿಗೆ

ಸ್ನೇಹ ಬೆಳೆಸಿ ಅವನ ಜೀವನದ ಅಲೆಗಳನ್ನು ಕೇಳಿ ಮರುಗುತ್ತಾರೆ. ಅಂದರೆ ಆತ ಉಳಿದುಕೊಂಡಿದ್ದ ಸ್ಥಳದಿಂದ ಸುಮಾರು ದೂರ ನಡೆದು ಬಂದಿದ್ದೆ, ವಯ್ಯಾರಿಯರು ತುಳುಕಾಡುವ ಮೋಹದಲ್ಲಿ ಗಮ್ಮನೆ ಸುಗಂಧದಲ್ಲಿ ಸುಳಿದುಹೋಗುತ್ತಿದ್ದರು. ಎಲ್ಲ ಪೇಟೆ ಪಟ್ಟಣಗಳಲ್ಲಿರುವಂತೆಯೇ ಅಲ್ಲೊಂದು ಮರದ ಕೆಳಗೆ ರಸ್ತೆ ಬದಿಯಲ್ಲಿ ಮೋಚಿಯೊಬ್ಬ ಅನೇಕ ಹರಿದ ಚಪ್ಪಲಿ, ಷೂ, ಚರ್ಮ, ರಬ್ಬರ್ ಇತ್ಯಾದಿಗಳನ್ನು ಹರಡಿಕೊಂಡು ಕಾಯಕದ ಪೂಜೆ ಮಾಡುತ್ತಿದ್ದ. ಡಬ್ಬದಲ್ಲಿ ಅದ್ದಿದ್ದ ಚರ್ಮಗಳನ್ನು ಹೊರಗಿಟ್ಟು ಅವನ್ನು ಪರೀಕ್ಷಿಸುತ್ತಾ ನಡೆದಾಡುವವರ ಕಾಲುಗಳನ್ನೆಲ್ಲ ನೋಡುತ್ತಾ ಮುಖನೋಡುತ್ತಾ ಕುಳಿತಿದ್ದ, ಬಸವಣ್ಣನ ಪಾದುಕೆಗಳ ಜೊತೆ ಶ್ರೀರಾಮನ ಪಾದುಕಾ ಕಿರೀಟಗಳನ್ನೆ ನೆನಪಿಸಿಕೊಳ್ಳುತ್ತಿದ್ದ ಸಂದರ್ಭ ಕಾಣುತ್ತದೆ.

ಇಂತಹ ಬಡತನದಲ್ಲೂ ಆತನ ಗಟ್ಟಿತನ ಕರಗದೇ ಮುಂದುವರಿಯುತ್ತಿದ್ದ. ಮೋಚಿಯ ಹೆಂಡತಿ ಪ್ರಿಯಕರನೊಡನೆ ಹೋಗುತ್ತಾಳೆ ಮತ್ತು ಇಬ್ಬರು ಹೆಣ್ಣುಮಕ್ಕಳು ಅಪ್ಪನ ಮಾತಿಗೆ ಬೆಲೆಕೊಡದೆ ಮನೆಬಿಟ್ಟು ಹೋಗಿ ತಂದೆಯ ಮನಸ್ಸನ್ನು ಮತ್ತಷ್ಟು ಒಂಟಿಸತೊಡಗುತ್ತಾರೆ. ಆತನ ಅಸಹಾಯಕತೆ ಎಂದೂ ಯಾರಿಗೂ ಕೇಳದೆ ಹೋಗಿದೆ. ಒಂದು ದಿನ ಹೆಂಡತಿ ಮತ್ತು ಮಕ್ಕಳು ನೆನಪಾಗಿ ಆತ ಅಂದುಕೊಳ್ಳುತ್ತಾನೆ, ಎಷ್ಟೋ ದಿನಗಳ ನಂತರ ಆದರೂ ಇವ್ವಾದರೂ ಬರುತ್ತಾರೋ ಇಲ್ಲವೋ ಎಂದು ಮಹಾದಾಸೆಯಿಂದ ನೋವಿನಿಂದ ಬಳಲುತ್ತಾನೆ. ಆಗಾಗ ಹೆಂಡತಿ ಹೋದ ಜಾಗಕ್ಕೆ ಆದರೂ ಹೋಗಿರಬೇಕೆಂದು ಹುಡುಕಿ ಹುಡುಕಿ ಬಸವಳಿದು ಇನ್ನೊಂದು ದಿನ ಕೆಂಪು ದೀಪದ ಗಲ್ಲಿಗಳಿಗೆ ಹೋಗುತ್ತಾನೆ. ಕರೆದ ಹೆಂಗಸರ ಮುಖವನ್ನೇ ದಿಟ್ಟಿಸಿ ನೋಡುತ್ತಾ ಇಲ್ಲೆಲ್ಲ ನನ್ನ ಮಕ್ಕಳು ನಿಂತಿರುವರೋ ಎಂದು ಹುಡುಕಾಡುತ್ತಾನೆ. ಹೀಗೆ ಎಷ್ಟೋ ದಿನಗಳು ಸುತ್ತಾಡಿದರೂ ಅವನ ಮಕ್ಕಳು ಸಿಗಲಿಲ್ಲ. ಕೊನೆಗೆ ನಿರಾಸೆ, ಸಿಟ್ಟು ಸೇಡಾಗಿ ತಿರುಗಿ ಅವರ ಸಹವಾಸವೇ ಬೇಡ ಎಂದು ತನ್ನ ಇಳಿವಯಸ್ಸಿನಲ್ಲಿ ಒಬ್ಬಂಟಿ ಮಾಡಿಹೋದರಲ್ಲ ಎಂದು ದುಃಖಿಸುತ್ತಾ, ಅವರನ್ನು ದೇವರೇ ಕಾಪಾಡುತ್ತಾನೆ ಎಂದು ತಡಕಾಟದಲ್ಲಿ ನಿಲ್ಲುತ್ತಾನೆ. ಆದರೆ ಒಂದು ದಿನ ಅವನಿಗೆ ಚೆನ್ನಾಗಿ ಗೊತ್ತಿದ್ದ ಒಂದು ಮುಖ ಎದುರಾಯಿತು. ಆ ಮುಖ ಸುಕ್ಕುಗಟ್ಟಿತ್ತು. ಮೈತುಂಬ ಗುಳ್ಳೆ ಗಾಯಗಳು ತುಂಬಿಕೊಂಡಿದ್ದವು. ರಸ್ತೆ ಬದಿಯಲ್ಲಿ ಆ ಹೆಂಗಸು ಭಿಕ್ಷೆ ಬೇಡುತ್ತ ಕುಳಿತಿದ್ದಳು. ಒಂದು ನೀನು ಬೇಡ ಎಂದು ಹೇಳದೆಯೂ ಕದ್ದು ಓಡಿಹೋಗಿದ್ದ ಅವನ ಹೆಂಡತಿ ಈಗ ಅಲ್ಲಿ ಯಾರ ಗುರುತನ್ನು ಅರಿಯಲಾಗದಷ್ಟು ನಿಶ್ಶಕ್ತಿಯಿಂದ ಕೊನೆ ದಿನಗಳನ್ನು ಲೆಕ್ಕ ಹಾಕುತ್ತಿದ್ದಾಳೆ. ಈತ ಅವಳನ್ನೇ ದಿಟ್ಟಿಸಿ ನೋಡಿದ ಸಾಕಷ್ಟು ನೋಡುತ್ತ ಇದ್ದ. ಆಕೆ

ಓಡಿ ಹೋದ ತನ್ನ ಹೆಂಡತಿ ಎಂದು ಅವನಿಗೆ ಯಾರೂ ಗುರುತು ಹೇಳಬೇಕಾಗಿರಲಿಲ್ಲ. ಅಂತ ಪ್ರತಿಭೆ ಪ್ರೀತಿ ಅವರಲ್ಲಿತ್ತು. ಕೊನೆಗೂ ಗೊತ್ತಾಯಿತು. ಆತ ಗುರುತು ಆಕೆಗೆ ಸಿಗಲಿ ಎಂದು ಎಷ್ಟೋ ಸಮಯ ನಿಲ್ಲುತ್ತಾನೆ. ಆದರೆ ಆಕೆಗೆ ಆತನ ಗುರುತು ಸಿಗಲಾರದು ಆಕೆ ನಿಶ್ಯಕ್ತಿಯಿಂದ ಬೇಡುವ ಕೈಗಳನ್ನು ಮೇಲಕ್ಕೆ ಎತ್ತಿ ಭಿಕ್ಷೆ ಬೇಡುತ್ತಿದ್ದಳು. ಆ ಕ್ಷಣವನ್ನು ಗಮನಿಸಿದ್ದ ಆತ ಒಂದು ಕ್ಷಣವಾದರೂ ಯಾವುದೇ ಕೋಪ ತೋರದೆ ಕರಗುತ್ತಾನೆ, ಅಂದರೆ ಆಕೆಯನ್ನು ಎಷ್ಟೊಂದು ಪ್ರೀತಿ, ಒಲವು ಇತ್ತು ಎಂಬುದನ್ನು ಕಥೆಯಲ್ಲಿ ಕಾಣುತ್ತೇವೆ. ಹಾಗೆ ಆಕೆಗೆ ನಿನ್ನ ಮಕ್ಕಳು ನಿನ್ನಂತೆಯೇ ಓಡಿಹೋದರು ಎಂದು ಹೇಳಲು ಇವನಿಗೆ ಮನಸ್ಸು ಬಾರದೆ ಹೋಗಿತ್ತು. ತನ್ನ ಒಡಲಿನ ನೋವುಗಳನ್ನು ಕ್ಷಣದಲ್ಲಿ ಮರೆತು, ಅವರವರ ಕರ್ಮ ಎಂದು ಅಕೆಯ ಹತ್ತಿರ ಹೋಗಿ ಒಂದು ಹಿಡಿ ಚಿಲ್ಲರೆ ಕಾಸು ಹಾಕಿ ಬರುತ್ತಾನೆ. ಅಪ್ಪರಲ್ಲಿ ನಿರೂಪಕರಿಗೆ ಹೇಳುತ್ತಾನೆ. ಚಿಲ್ಲರೆ ಯಾಕೆ ಹಾಕಿದೆ ಎಂದರೆ ಹೆಂಡತಿ ಆಗಿದ್ದಳು ಅನ್ನೋ ಋಣಕ್ಕೆ ಹಾಕಿದೆ. ಸಾಯುವಾಗ ಒಂದಿಡಿ ಮಣ್ಣಾಕ್ತಾರಲ್ಲ ಹಾಗೆ ಹಾಕ್ದೆ, ಒಂದಿಡಿ ಮಣ್ಣಿಗೆ ಬದಲಾಗಿ ಕಾಸನ್ನಾದರೂ ಹಾಕಿದರೆ ಇನ್ನೊಂದು ದಿನ ಬದುಕಿದ್ದು ಹೋಗ್ತಾಳೆ ಅಂತಾ ಹಾಗೆ ಮಾಡ್ದೆ ಎಂದು ಮಾತು ನಿಲ್ಲಿಸಿ ಎಲೆಅಡಿಕೆ ಹಾಕಿಕೊಳ್ಳತೊಡಗುತ್ತಾನೆ.

ಅಪ್ಪರಲ್ಲಿ ಲೇಖಕರಿಗೆ ಯಾವ ಪ್ರಶ್ನೆನೂ ಇರಲಿಲ್ಲ, ಕೆಲವು ತಿಂಗಳು ಕಳೆದ ನಂತರ ಅದೇ ಜಾಗಕ್ಕೆ ಹೋಗಿ ಕೇಳಿದಾಗ ಆಕೆ ಸತ್ತು ತಿಂಗಳಾಯಿತು ಎಂದು ಸುದ್ದಿ ತಿಳಿಯುತ್ತದೆ. ಹಾಗೆ ಆ ಹೆಣವನ್ನು ನಗರಪಾಲಿಕೆ ಅವರು ತೆಗೆದುಕೊಂಡು ಎಲ್ಲೋ ಹಾಕಿದರಂತೆ ಎಂದು ಮಾತುಗಳು ಬರುತ್ತವೆ. ಅಪ್ಪರಲ್ಲಿ ಆತ ಬಂದು ಸ್ವಾಮಿ; ನಿಜ ಹೇಳಿದ್ದು ಆವೊತ್ತು ನಾನು ಯಾವತ್ತೂ ದುಃಖ ಮಾಡದಷ್ಟು ಮಾಡ್ದೆ ಬದುಕಿದ್ರೆ ಕರ್ಕಬರುವಾ ಅಂತಾ ಹೋಗಿದ್ದೆ, ಅಲ್ಲಿ ಆಕೆ ಸತ್ತುಹೋಗಿದ್ದಳು. ಈಗ ಆ ನನ್ನ ಮಕ್ಕಳು ಎಲ್ಲಿದ್ದಾವೋ ಗೊತ್ತಿಲ್ಲ ಎಂದು ಮರಗುತ್ತಾನೆ. ಹಾಗೆ ನನಗೂ ಹೀಗೆ ವಯಸ್ಸಾಗುತ್ತಾ ಇದೆ ಈ ಮರದ ಕೆಳಗೇ ನಾನೂ ಒಂದಿನ ಹೆಣವಾಗಿ ಮಲಗಿರ್ತೀನಿ ಸಾಯುವಾಗ ಹೆಂಡತಿ, ಮಕ್ಕಳು ಅಂತ ಅವರು ಇದ್ದು ಬಾಯಿಗೆ ಈ ಎಕ್ಕದ ನೀರ ಬಿಡೋಕೆ ಯಾರೂ ಇರೋದಿಲ್ವಲ್ಲಾ ಎಂಬುದೊಂದೆ ಈಗ ಇರೋ ನೋವು ಎಂದು ಸಂಕಟದಿಂದ ನೋವನ್ನು ತೋಡಿಕೊಳ್ಳುತ್ತಾನೆ.

ಲೇಖಕರು ಸಮಾಧಾನ ಮಾಡಲು ಮನಸ್ಸಿನಲ್ಲಿ ಬೇಸರವಾಗಿ ಹಿಂತಿರುಗಿ ಬರುವ ಒಂದು ದೃಶ್ಯವನ್ನು ಕಂಡು ಮರುಗುತ್ತಾರೆ. ಅದು ತಲೆಯ ಮೇಲೆ ವಿಮಾನ ಬಹಳ ಸುಂದರವಾಗಿ ಕಾಣುತ್ತಾ ಹಾರುತ್ತಾ ಮಾಯವಾಗುತ್ತಿತ್ತು. ಹಾಗೆ ಆ ಮೋಚಿ ಅದನ್ನೊಮ್ಮೆ ತಿರಸ್ಕಾರದಿಂದೆಂಬಂತೆ ನೋಡಿ ಎಲೆಅಡಿಕೆ ಜಗಿದಿದ್ದನ್ನು ತುಪಕ್ಕನೆ ಉಗಿದ. ಕೆಂಪು ಕೆಂಪಗೆ

ಅಲ್ಲೆಲ್ಲ ಎಲೆಅಡಿಕೆ ರಸ ರಕ್ತದಂತೆ ಚೆಲ್ಲಿಕೊಂಡಿತ್ತು. ಹೀಗೆ ನಮ್ಮ ಸಮಾಜದಲ್ಲಿ ಎಷ್ಟು ಜನರಿಗಿದೆ ಎಂಬುದು ಅರ್ಥವಾಗುತ್ತದೆ. ಇಂತಹ ಮಾನವೀಯ ಅಂತಃಕರಣ ಮನುಷ್ಯ ಪ್ರೀತಿ, ಮೋಚಿಯಂತ ವ್ಯಕ್ತಿಗಳಲ್ಲಿಯೂ ಕಂಡುಬರುತ್ತದೆ. ಇಂತಹ ಮನುಷ್ಯ ಪ್ರೀತಿ ಇರುವಂತಹ ಜನರ ಬದುಕು ಮಾತ್ರ ಬಹಳ ಶೋಚನೀಯವಾಗಿದೆ. ಅವರ ಬದುಕು ಮರದಡಿಯಲ್ಲಿ ಅಂದರೆ ರಸ್ತೆಯ ಬದಿಯಲ್ಲಿರವು ಮರದಡಿಯಲ್ಲಿ ಕುಳಿತು ಕಾಯಕ ಮಾಡುವ ರೀತಿ ನಮ್ಮ ಸಮಾಜದ ಸ್ಥಿತಿಯಾಗಿದೆ. ಇಂತಹ ಹಲವು ಜನರ ಬದುಕನ್ನು ಹೇಳುವಂತಹ ಕಲೆ ನಮ್ಮ ಮೊಗಳ್ಳಿಯಂತಹ ಸೃಜನಶೀಲವಾದ, ತಂತ್ರಗಾರಿಕೆಯುಳ್ಳ, ಮಾನವೀಯತೆಯ ಹೃದಯತೆ ಹೊಂದಿರುವವರಿಗೆ ಇರುತ್ತದೆ. ಈ ಮೂಲಕ ದಲಿತರ ಜೀವನವನ್ನು ಸಂವೇದಕರು ಅಭಿವ್ಯಕ್ತಿಸುತ್ತಾರೆ. ಕಥೆಯಲ್ಲಿ 'ಮೋಚಿ' ಎಂಬಾತನಿಗೆ ಕಾಯಕದಲ್ಲಿ ನಿಷ್ಠೆ ಇತ್ತು, ಕೌಟುಂಬಿಕದಲ್ಲಿ ಅಗಾಧ ಪ್ರೀತಿ ವಾತ್ಸಲ್ಯತೆ ಇತ್ತು, ಹೀಗೆ ಮೊಗಳ್ಳಿಯವರ 'ಮಾದರಿ' ಎಂಬ ಕಥೆಯಲ್ಲಿ ವಿಭಿನ್ನ ನೆಲೆಗಳಾಗಿ ಕಥೆ ವಿಸ್ತಾರಗೊಳ್ಳುತ್ತದೆ. ಹಾಗೆ ಲೇಖಕರು ಸಮೀಪದಲ್ಲಿ ಗ್ರಹಿಸಿದ ದೃಶ್ಯಾವಳಿಗಳನ್ನು ಸಮಾಜಕ್ಕೆ ಮುಖಾಮುಖಿ ಮಾಡಿರುವುದು ಸ್ಪಷ್ಟವಾಗುತ್ತದೆ.

**'ಕಿಚ್ಚು'** ಕಥೆಯ ಸಾಕಕ್ಕ ದೊಡ್ಡವರ ಹೊಲದಲ್ಲಿ ಕಡಲೆಕಾಯಿ ಬಿಡಿಸುವ ಕಾಯಕಕ್ಕೆ ಹೋಗುವ ಸ್ಥಿತಿಯನ್ನು ನೋಡಿದರೆ, ಇವಳ ಕುಟುಂಬದಲ್ಲಿ ಬಡತನದ ತೀವ್ರತೆ ಎದ್ದುಕಾಣುತ್ತದೆ. ಈಕೆಯ ಮಗಳಾದ ಪುಟ್ಟಿಯು ರೊಟ್ಟಿ ಸಿಗಬಹುದೆಂಬ ಹಂಬಲದಿಂದ ತಾಯಿ ಬರುವುದನ್ನು ಕಾಯುತ್ತಿರುತ್ತಾಳೆ. ಚೂರು ರೊಟ್ಟಿಗಾಗಿ ಪುಟ್ಟಿಯ ಜೊತೆಯಲ್ಲಿದ್ದ "ನಾಯಿ"ಯು ಅವಳನ್ನೆ ಅನುಕಂಪದಿಂದ ನೋಡುತ್ತಿರುತ್ತದೆ.

ಈ ಸಂದರ್ಭಗಳನ್ನು ಗಮನಿಸಿದರೆ, ದಲಿತರು ಹಸಿವನ್ನು ನೀಗಿಸಿಕೊಳ್ಳುವುದು ಸವಾಲಾಗಿ, ಅದಕ್ಕಾಗಿ ಪಡುವ ಬವಣೆಗಳು ಮುಖ್ಯವಾಗುತ್ತವೆ. ಶೋಷಿತ ವರ್ಗದ ಮಹಿಳೆಯರಲ್ಲಿ ಹಸಿವು ರೋಷಭರಿತವಾಗಿಯೂ ಸಾವಧಾನವಾಗಿಯೂ ಕಂಡುಬಂದಿದ್ದು, ಕುಟುಂಬದ ನಿರ್ವಹಣೆಯನ್ನು ಮಾಡಿಕೊಂಡು ಬದುಕುವಂತಹ ವಿವಿಧ ಮುಖಗಳನ್ನು ಕಾಣುವುದರಲ್ಲಿ ಕ್ರಿಯಾಶೀಲತೆ ಎದ್ದು ತೋರುತ್ತದೆ.

ಸಾಕಕ್ಕನು ತನ್ನ ಬದುಕನ್ನು ಕಟ್ಟಿಕೊಳ್ಳುವ ರೀತಿಯನ್ನು ನೋಡಿದರೆ 'ಈಸಬೇಕು ಇದ್ದು ಜಯಿಸಬೇಕು' ಎಂಬ ಮಾತಿಗೆ ಪೂರಕವಾಗಿ, ತನ್ನ ಸಂಸಾರದ ಉಳಿವಿಗಾಗಿ ಹೋರಾಡುವುದು ಗಮನಾರ್ಹವಾದುದು. ಈಕೆಯ ಅಸಾಧಾರಣ ಸ್ತ್ರೀಯಾಗಿ ಗೋಚರಿಸು-ವುದನ್ನು ಕಥೆಗಾರರು ವಿಶೇಷವಾಗಿ ಚಿತ್ರಿಸಿದ್ದಾರೆ.

"ಮಲಕ್ಕ ಮಗ, ವತಾರಕೆ ಐಯ್ನೋರ್‌ವಲ್ಕೆ ಕಡ್ಲೆಕಾಯಿ ಬಿಡ್ಸುಕೋಗ್ಬೇಕು, ಬ್ಯಾಗ್‌ಯೇಳ್ ಬೇಕು ಮಲ್ಕ"[5] ಎಂದಾಗ ಊಂ ಊಂ ಎನ್ನುತ್ತಾ ಹಳೆ ಸೀರೆಗಳನ್ನು ಹೊಲೆದು ಮಾಡಿದ್ದ ಹಾಸಿಗೆಯ ಮೇಲೆ ಮುದುರಿಕೊಂಡು ಎಣ್ಣೆಯಾಗಿ ಜಿಡುಗಟ್ಟಿದ ಬಟ್ಟೆಗಂಟಿನ ತಲೆದಿಂಬಿಗೆ ಮುಖ ಹಾಕಿ ಮಲಗಿಬಿಟ್ಟಳು ಪುಟ್ಟಿ" ಎಂಬ ಮಾತುಗಳು, ಸಾಕಕ್ಕ ತನ್ನ ನೆರೆಹೊರೆ ಜನರ ಎದುರು ಸರಿ ಸಮಾನವಾದ ಬಾಳನ್ನು ಕಟ್ಟಿಕೊಳ್ಳಲು ಹೆಣಗಾಡುವುದನ್ನು ಕಥೆಯ ಉದ್ದಕ್ಕೂ ಕಾಣಬಹುದು.

**'ಬೇಟೆ'** ಕಥೆಯ ಕರಿಯಣ್ಣನ ಜೀತಾಗಾರಿಕೆಯನ್ನು ಬಿಟ್ಟು ಮೀನು ಹಿಡಿಯುವ ಕಸುಬಿನಲ್ಲಿ ತೊಡಗಿರುತ್ತಾನೆ. ಈತನು ಹಾಕಿದ ಕೂಳೆಯಿಂದ ಬಂದ ಮೀನನ್ನು ಗೌಡರ ಕಡೆಯವರು ಕದ್ದೊಯ್ಯುತ್ತಾರೆ. ಇಂತಹ ಸ್ಥಿತಿಯಲ್ಲಿ ಕರಿಯಣ್ಣನು ತುಂಬಾ ಚಿಂತನೆಗೆ ಒಳಗಾಗುವುದು, ಗಮನಾರ್ಹವಾದದ್ದು. ಹಸಿವನ್ನು ನೀಗಿಸಿಕೊಳ್ಳಲು ಮಾಡುವ ಪರ್ಯಾಯ ವೃತ್ತಿಯನ್ನು ತಡೆಯುವ ಪ್ರಕ್ರಿಯೆಯನ್ನು ಕರಿಯಣ್ಣ ಸಮರ್ಥವಾಗಿ ನಿಭಾಯಿಸುತ್ತಾನೆ.

ಹೆಂಡತಿಯಾದ 'ಹನುಮಿ'ಯು ತನ್ನ ಗಂಡನಿಗಾದ ದುಸ್ಥಿತಿ ಕಂಡು ಮರುಗುವ "ಅಲಾ ಅದ್ಯಾವ್ ಸಾಮ್ರಾಜ್ಯ ವಂಟೋಯ್ತು ಅಂತ ಗೊಣಗಾಡಿಯೆ? ಕದ್ದಿ ತಿಂದೋರ್ ಮನೆ ಗುಡ್ಸಿ ಗುಂಡಾಂತ್ರ ಆಗಿ ಯಕ್ಕುಟ್ಟೋಯ್ತದೆ ಖನ ಮಲಕೊ ಇಪಟು, ಈ ಊರಿಲ್ಲ ಅಂದ್ರೆ ಇನ್ನೊಂದುರು ಇನ್ನೊಂದೇಸ, ಕೊಕ್ರೆಗೆ ಒಂದೂರೋ ಒಂದ್ ಕೆರೆಯೋ"[6] ಎಂದು ಹನುಮಿ ಯಾವತ್ತೂ ಇಲ್ಲದ ಧೈರ್ಯದಲ್ಲಿ ಗಂಡನಿಗೆ ಸಮಾಧಾನ ಹೇಳಲು ತೊಡಗಿ ಉಬ್ಬಸದ ಉಸಿರಾಟದಲ್ಲಿ ಕೆಮ್ಮ ತೊಡಗುವುದು ಆಕೆಯ ಎದೆಗಾರಿಕೆಯನ್ನು ಸೂಚಿಸುತ್ತದೆ. ದಲಿತರು ಹಿಡಿದ ಮೀನು ಮಾತ್ರ ಗೌಡರಿಗೆ ಬೇಕು, ಆದರೆ ಶೋಷಿತರನ್ನು ಗೌರವಿಸುವ ಮನೋಭಾವ ಎಂದು ಮೂಡುತ್ತದೆ. ಎಂಬ ಗಂಭೀರ ಪ್ರಶ್ನೆಯನ್ನು ಈ ಕಥೆ ಮುಂದಿಡುತ್ತದೆ.

ದೊಡ್ಡವರು ಕರಿಯಣ್ಣನ ಬದುಕನ್ನು ನಿಯಂತ್ರಿಸುವ ಮತ್ತು ವೃತ್ತಿಗೆ ಅಡ್ಡಿಯನ್ನು ಮಾಡುವುದು ಶತಶತಮಾನದಿಂದಲೇ ಕಂಡುಬರುತ್ತದೆ. ದಾರುಣವಾದಂತಹ ಹಸಿವಿನ ಸಂಕೋಲೆಯನ್ನು ಕರಿಯಣ್ಣನು ಮುಖಾಮುಖಿಯಾಗಿ ನಿಭಾಯಿಸುವಂತ ಘಟನೆಗಳನ್ನು ಗಮನಿಸಿದರೆ ನೂರಾರು ನೋವುಗಳ ನಡುವೆ, ದಲಿತರ ಜೀವಚೈತನ್ಯ ಸಂಕಷ್ಟಗಳ ಹಿಂದೆ ಮರೆಯಾಗಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ.

**‘ವ್ಯೂಹ’** ಕಥೆಯ ‘ದಾಸ’ನು ಸ್ವಾಮಿನಿಷ್ಠೆಯನ್ನು ತೋರಿಸುವುದರ ಮೂಲಕ ಕಥೆ ತೆರೆದುಕೊಳ್ಳುತ್ತದೆ. ಈತ ಸುಬ್ಬೇಗೌಡನ ಮನೆಯಲ್ಲಿ ಕೂಲಿ ಕೆಲಸಕ್ಕಾಗಿ ಸೇರಿಕೊಂಡಿರುತ್ತಾನೆ. ಕಾರಣ ದಾಸನು ಕುಟುಂಬದ ನಿರ್ವಹಣೆಗಾಗಿ ಯಜಮಾನರು ನೀಡುವ ಕೂಲಿಯನ್ನೆ ನಂಬಿಕೊಂಡು ಬದುಕಬೇಕಾಗಿತ್ತು. ಧಣಿಗಳಿಗೆ ಸರ್ಕಾರದಿಂದ ಸಾಲ ಸೌಲಭ್ಯ ಸಿಗುತ್ತಿರಲಿಲ್ಲ. ಇದನ್ನೆ ನಂಬಿಕೊಂಡು ಕಾಯಕ ಮಾಡುತ್ತಿದ್ದ ದಾಸ ಬದುಕನ್ನು ಕಟ್ಟಿಕೊಳ್ಳಲು ಹೆಣಗಾಡುತ್ತಿದ್ದನು. ದಲಿತರಿಗೆ ಕೂಲಿ ಇದ್ದರೆ ಮಾತ್ರ ಜೀವನವನ್ನು ಸರಾಗವಾಗಿ ನಡೆಸಬಹುದಿತ್ತು. ಮುಖ್ಯವಾಗಿ ಇವನನ್ನೇ ನಂಬಿಕೊಂಡು ಮನೆಯಲ್ಲಿದ್ದ ನಾಯಿಯು ಹಸಿವಿನ ಒಡೆತಕ್ಕೆ ಸಿಲುಕಿ ನರಳಾಡುತ್ತಿತ್ತು.

ಈತನ ಮನೆಯನ್ನು ಕಾಯುತ್ತಿದ್ದ ‘ನಾಯಿ’ಯು ತನ್ನ ಮರಿಗಳಿಗೆ ಹಾಲುಣಿಸಲು ತ್ರಾಣವಿಲ್ಲದ ಪರಿಸ್ಥಿತಿಯನ್ನು ನೋಡಿದರೆ ಹಸಿವು ದಲಿತರನ್ನಷ್ಟೇ ಕಾಡದೆ, ಅವರು ಸಾಕುತ್ತಿದ್ದ ಪ್ರಾಣಿಗಳಿಗೂ ಆವರಿಸಿಕೊಂಡಿತ್ತು ಎಂಬ ಅಂಶ ಸ್ಪಷ್ಟವಾಗುತ್ತದೆ. ಧಣಿಯ ದರ್ಪಕ್ಕೆ ಸಿಲುಕಿಕೊಂಡ ‘ದಾಸ’ನ ಬದುಕು ಅತಂತ್ರ ಸ್ಥಿತಿಗೆ ತಲುಪುತ್ತದೆ. ಸುಬ್ಬೇಗೌಡನ ಹೆಂಡತಿಯಾದ ಲಕ್ಷ್ಮಮ್ಮಳು ಮನೆಗೆ ದಾಸನು ಬಂದಿದ್ದ ವಿಚಾರವನ್ನು ತಿಳಿಸುತ್ತಾಳೆ. ಇದಕ್ಕೆ ಕೋಪಗೊಂಡ ಗೌಡರು “ಬೆಳಬೆಳಿಗ್ಗೆಯೇ ಆ ದರಿದ್ರ ಸೂಳೇಮಗ ನನ್ ಮನೆ ಕೊಟ್ಗೇಲಿ ಬಂದ್ ಕೂತ್ಕಂಡ್ ದುಡ್ಡು ಕೇಳುವಂಗಾದ್ನೆ”[೬] ಎಂದು ದರ್ಪದಿಂದ ಅವನನ್ನು ಹೀಯಾಳಿಸುತ್ತಾನೆ.

ಕೂಲಿಕಾರನಾದ ದಾಸನಿಗೆ ಸರಿಯಾಗಿ ಹಣಪಾವತಿಸುವುದಿಲ್ಲ. ಇವರು ಶತಶತಮಾನಗಳಿಂದಲೂ, ದಲಿತರನ್ನು ನಡೆಸಿಕೊಂಡು ಬಂದ ರೀತಿಯನ್ನು ನೋಡಿದರೆ ಉಳ್ಳವರ ಒಡೆತಕ್ಕೆ ಸಿಕ್ಕಿ ಜರ್ಜರಿತವಾಗಿರುವುದು ಸ್ಪಷ್ಟವಾಗುತ್ತದೆ. ದುಡಿದ ಕೆಲಸಕ್ಕಾಗಿ ಹಣವನ್ನು ಕೇಳುವ ಧೈರ್ಯವು ಇವರಿಗಿರಲಿಲ್ಲ, ಇಂತಹ ಎಷ್ಟೋ ಘಟನೆಗಳು ಭೂತಕಾಲದಲ್ಲಿ ಗತಿಸಿಹೋಗಿದ್ದರು ಕೂಡ, ವರ್ತಮಾನಕಾಲದಲ್ಲಿಯೂ ಶೋಷಿತರು ಎದುರಿಸುತ್ತಿರುವ ಸಮಸ್ಯೆಗಳನ್ನು ಕಥೆಗಾರರು ತಮ್ಮ ಗ್ರಾಮೀಣ ಭಾಷೆಯ ಬನಿಯೊಡನೆ ಸಮರ್ಥವಾಗಿ ಕಟ್ಟಿಕೊಡುತ್ತಾರೆ. ಪ್ರಧಾನವಾಗಿ ಇವರಿಗೆ ರಾಜಕೀಯ ಬೆಂಬಲ ಇಲ್ಲದಿರುವುದು ಇಂದಿಗೂ ವಾಸ್ತವ ಸತ್ಯ ಎಂಬುದನ್ನು ‘ಲೇಖಕರು ‘ದಾಸ’ನ ಪಾತ್ರದ ಮೂಲಕ ಸಮಾಜದ ವ್ಯವಸ್ಥೆಯಲ್ಲಿರುವ ಕಾರಣೀಭೂತವಾದ ವಿಚಾರಗಳನ್ನು ಚಿತ್ರಿಸಿದ್ದಾರೆ.

**‘ತಣಿಗೆ’** ಕಥೆಯಲ್ಲಿ ಪರಂಪರೆಯಿಂದ ಬಂದ ತಣಿಗೆ ‘ತಾತಾ’ನ ಕುಟುಂಬದ ಜೀವಾಳವಾಗಿತ್ತು. ಬದುಕಿನ ಆಧಾರಸ್ಥಂಬವಾಗಿ ಮೌಲ್ಯದ ಪ್ರತಿಬಿಂಬವಾಗಿತ್ತು. ಗೌಡರ

ಮನೆಯಲ್ಲಿ ಸಾಲಕ್ಕಾಗಿ ಅಡವಿಡುವ ಮೂಲಕ ದಲಿತರ ದಾರಿದ್ರ್ಯಕ್ಕೆ ಸಹಾಯಕವಾಯಿತು. ದುಸ್ಥಿತಿಯನ್ನು ಕಂಡು ಅಜ್ಜ ತೊಳಲಾಡುವ ಸಂದರ್ಭ ಗಂಭೀರವಾದುದಾಗಿದೆ. ತಮ್ಮ ಹಿರಿಯ ತಲೆಮಾರಿನಿಂದ ಬಂದ ಗೌರವದ ಸಂಕೇತವಾದ ತಣಿಗೆಯನ್ನು ಉಳಿಸಿಕೊಳ್ಳಲಾಗಲಿಲ್ಲವಲ್ಲ ಎಂದು ತಾತ ಮರುಗುತ್ತಾನೆ. ಏಕೆಂದರೆ ತಾತ ಮೊಮ್ಮಕ್ಕಳ ದುಡಿಮೆಯನ್ನು ಎಂದು ನಂಬಿದವನಲ್ಲ. ತಾನು ಸಾಯುವತನಕ ಎಲ್ಲರ ಹೊಟ್ಟೆಗೂ ಊಟ ಹಾಕಬೇಕೆಂಬ ಹಠ ಅವನಲ್ಲಿತ್ತು. ಹಾಗಾಗಿ ದುಡಿಮೆಯ ಹಣ ಅವರ ಹಸಿವನ್ನು ಪೂರೈಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ನಮ್ಮ ಸುಖಸಂತೋಷ, ಸಂಪತ್ತು ಮನೆಯಿಂದ ಹೊರಗೆ ಹೋಗಬಾರದೆಂದು ಅಜ್ಜ ಮನದಾಸೆ ಇಟ್ಟುಕೊಂಡಿದ್ದನು.

ಒಮ್ಮೆ 'ತಾತಾ'ನು ತನ್ನ ಮೊಮ್ಮಗನನ್ನು ಕರೆದು ನನ್ನ ಕೊನೆ ಆಸೆಯನ್ನು ಈಡೇರಿಸುವೆಯಾ...? ಎಂದು ಬೇಡಿಕೊಳ್ಳುತ್ತಾನೆ. "ಅದೇನೆಂದರೆ ನೀನು ಚಿಕ್ಕೋನು ಇದ್ದಾಗ ನಮ್ಮನೆ ಭೂಮ್ತಾಯಿ ತರವಾಗಿ ಇತ್ತಲ್ಲಾ ಆ ದೊಡ್ ತಣಿಗೆ ಅದಾ ಬಿಡಿಸ್ಕಬಂದು ನನ್ಗೋನ್‌ಸಲ ಕೊಟ್ಟಿಯೇನಪ್ಪಾ ಎಂದು ದೀನನಾಗಿ ಬೇಡಿದ"[೭] ಅವನ ಕೊನೆ ಆಸೆಯನ್ನು ಕೇಳಿಸಿಕೊಂಡು ಎಲ್ಲರೂ ನಕ್ಕುಬಿಟ್ಟರು. ತಾತಾ ಯಾವುದೋ ತಪ್ಪುಮಾಡಿದೆ ಎಂಬಂತೆ ಮೌನವಾದ.

ಅಜ್ಜನ ತಣಿಗೆಯನ್ನು ನೋಡಿ ಮೊಮ್ಮಗನಿಗೆ ಅಳು ತಡೆಯಲು ಆಗಲಿಲ್ಲ. ಕಾರಣ ದೊಡ್ಡಸ್ಥಾನದಲ್ಲಿದ್ದ ತಣಿಗೆಯನ್ನು ತಾತಾ ಕೊನೆಯಲ್ಲಿ ಕೋರಿಕೊಂಡಿದ್ದರಿಂದ ನನಗೆ ದುಃಖ ಇಮ್ಮಡಿಯಾಯಿತು. ಸಾಂಸ್ಕೃತಿಕವಾಗಿ ದೈವಿಕ ಎಂದು ಕರೆಯುತ್ತಿದ್ದ ಕಂಚಿನ ತಣಿಗೆಯನ್ನು ಹರಾಜು ಹಾಕುವ ಹೀನಾಯ ಸ್ಥಿತಿಯನ್ನು ನೋಡಿದರೆ ಕೆಳಜಾತಿಯ ಜನರ ಹಸಿವಿನ ಪರಿಯನ್ನು ಕಥೆ ಸಮರ್ಥವಾಗಿ ಕಟ್ಟಿಕೊಡುತ್ತದೆ. ಅಜ್ಜನು ಸಾಯುವ ಅಂತ್ಯಸ್ಥಿತಿಯನ್ನು ನೋಡಿದರೆ, ಆ ತಟ್ಟೆಯು ಅವನ ಹೃದಯ ಭಾಗವಾಗಿದೆ. ತಣಿಗೆಯ ಮೂಲಕ 'ತಾತಾ'ನ ದೈವಿಭಕ್ತಿಯನ್ನು ಹಾಗೂ ಜೀವನದ ಒಡಲನ್ನು ತುಂಬಿಸುವ ಹಣತೆ, ತಣಿಗೆ ಗಮನಸೆಳೆಯುತ್ತದೆ.

ಕಥೆಯ ಅಂತಿಮದಲ್ಲಿ 'ತಾತಾ'ನಿಗೆ ತಣಿಗೆ ಬಗೆ ಇರುವ ಔದಾರ್ಯ ದೈವತ್ವದ ಭಕ್ತಿ ಹಾಗೂ ಬಡತನವನ್ನು ನಿರ್ಮೂಲನೆ ಮಾಡುವ ಮೂಲಕ ಕಥೆಗಾರರು ದಲಿತ ಸಂಸ್ಕೃತಿಯ ಆಚರಣೆಯ ಬಗ್ಗೆ ತಮ್ಮ ಅನುಭವದ ವಿಚಾರಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಮೊಗಳ್ಳಿ ಅವರ ಕಥೆಗಳಲ್ಲಿ ಹಸಿವು ಮತ್ತು ಬಡತನ ಒಂದು ನಾಣ್ಯದ ಎರಡು ಮುಖಗಳಂತೆ ಗೋಚರವಾಗುತ್ತದೆ. ಆದರೆ ಇಲ್ಲಿಯ ಪಾತ್ರಗಳು ಹಸಿವು ಮತ್ತು ಬಡತನದ

ಬೇಗುದಿಯಲ್ಲಿ ಬೆಂದು ಹೋಗದೆ ಅದನ್ನು ಸಮರ್ಥವಾಗಿ ಎದುರಿಸಿ ನಿಲ್ಲುವ ಪ್ರಕ್ರಿಯೆಯಲ್ಲಿ ಕಥೆಗಳಿಗೆ ಅನನ್ಯತೆ ಪ್ರಾಪ್ತವಾಗಿದೆ.

**೧.೨. ಸ್ತ್ರೀ ಪಾತ್ರಗಳ ಚಿತ್ರಣ:**

ಕಥೆಗಾರರು ಅವರ ಬದುಕಿನ ನೋವು, ಹತಾಶೆಗಳನ್ನು ಸ್ವತಃ ಅನುಭವಿಸಿ ನೊಂದ ಜೀವಿಗಳ ಬಾಳಿನ ಪಾಡುಗಳನ್ನು ಅಕ್ಷರದ ಮೂಲಕ ಕಟ್ಟಿಕೊಟ್ಟಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಗ್ರಾಮೀಣ ಮಹಿಳೆಯರು, ಅದರಲ್ಲೂ ದಲಿತ ಮಹಿಳೆಯರ ಮೇಲಾಗುವ ದೌರ್ಜನ್ಯ, ಅಪಮಾನ, ದಬ್ಬಾಳಿಕೆ, ಅತ್ಯಾಚಾರ ಇವುಗಳು ಇವರ ಕಥೆಯ ವಸ್ತುಗಳಾಗಿವೆ. ದಲಿತ ಸ್ತ್ರೀಯರ ಮೇಲಾಗುವ ಲೈಂಗಿಕ ದೌರ್ಜನ್ಯಗಳ ವಿವಿಧ ಮಜಲುಗಳನ್ನು ಕಥೆಗಾರರು ಚಿತ್ರಿಸಿದ್ದಾರೆ.

ಶೋಷಿತ ಸ್ತ್ರೀಯರು ಉನ್ನತ ಜಾತಿಯ ಪುರುಷರಿಂದ ಅಲ್ಲದೆ ತಮ್ಮ ಸಮುದಾಯದ ಗಂಡಸರಿಂದಲೂ, ಅಪಮಾನಕ್ಕೆ ತುತ್ತಾಗಿ ಕಣ್ಣೀರಿನ ವ್ಯಥೆಯ ಮಡುವಿನಲ್ಲಿ ತೊಳಲಾಡುವ ಸಂದಿಗ್ಧ ಪರಿಸ್ಥಿತಿಗಳು ಕಥೆಗಳ ಒಡಲಿನಲ್ಲಿ ವ್ಯಾಪಿಸಿಕೊಂಡಿವೆ. ಶೋಷಣೆಗೆ ಒಳಗಾಗಿ ಜೀವನದ ಅಂತ್ಯವನ್ನು ಕಾಣುವ ಕೆಲವು ಸ್ತ್ರೀಪಾತ್ರಗಳು ಸಹಜವೆಂಬಂತೆ ಮೂಡಿಬಂದಿವೆ. ಬದುಕಲು ತಮ್ಮ ದೇಹವನ್ನು ಮಾರಿಕೊಳ್ಳುವ ಪಾತ್ರಗಳು ಸಹ ಕಂಡುಬರುತ್ತವೆ. ಲೇಖಕರು ಸಾಹಿತ್ಯದ ಉದ್ದಕ್ಕೂ ಹರಡಿರುವ ದಲಿತ ಸಂವೇದನೆ ಮತ್ತು ಸಾಂಸ್ಕೃತಿಕತೆ ವಿವರಣೆಯೊಂದಿಗೆ ನೈಜತೆಯಿಂದ ಕೂಡಿದ ತುಳಿತಕ್ಕೆ ಒಳಗಾದವರ ಕತೆಗಳನ್ನು ಸಮಾಜದ ಮುಂದಿಟ್ಟಿದ್ದಾರೆ.

ಇವರ ಕಥೆಗಳು ಸಹೃದಯರನ್ನು ಚಿಂತನೆಗೆ ಪ್ರೇರೇಪಿಸುತ್ತವೆ. ಬಹುಪಾಲು ಕಥೆಗಳಲ್ಲಿ ನೊಂದ ಸ್ತ್ರೀಯರ ಹೃದಯವಿದ್ರಾವಕ ಸ್ಥಿತಿಗಳು ಕಂಡುಬರುತ್ತವೆ. ಹಲವು ಸ್ತ್ರೀಯರು ವ್ಯವಸ್ಥೆಯಲ್ಲಿ ಬದುಕುಳಿಯಲಾರದೆ ಹೋದರೆ, ಮತ್ತೆ ಕೆಲವರು ಅಪಮಾನಕ್ಕೆ ಒಳಗಾಗಿ ತಮ್ಮ ಬದುಕನ್ನು ಕಟ್ಟಿಕೊಳ್ಳುತ್ತಾರೆ. ಗ್ರಾಮೀಣ ದಲಿತ ಹೆಣ್ಣುಮಕ್ಕಳ ನೋವಿನ ಮಿಡಿತದ ಜೊತೆಗೆ, ಅವರ ಬದುಕಿನ ಬವಣೆಗಳನ್ನು ಸೋಪಜ್ಞವಾಗಿ ಮನಕಲಕುವಂತೆ ಕತೆಗಾರರು ಚಿತ್ರಿಸಿದ್ದಾರೆ.

**'ಅಲ್ಲಿ ಆ ಅಳು ಈಗಲೂ'** ಕತೆಯಲ್ಲಿ ಒಬ್ಬ ಹೆಣ್ಣು ತನ್ನ ಹುಟ್ಟಿದ ಬಗ್ಗೆ ಬೇಸರವನ್ನು ವ್ಯಕ್ತಪಡಿಸುವುದು, ಆಕೆಯ ಜೀವನದ ದುಃಖ ದುಮ್ಮಾನಗಳಿಗೆ ಕಾರಣವಾಗುತ್ತದೆ. ಕಥೆಯಲ್ಲಿ ಬರುವ 'ಹೂವ'ನು ಬೆಳಿಗ್ಗೆಯಿಂದ ಅಳುವಿನ ಸಾವಿರಾರು ರೂಪವನ್ನು ಬಿಚ್ಚುತ್ತಾನೆ. ಒಮ್ಮೆ

ಜೋರಾಗಿ ಇನ್ನೊಮ್ಮೆ ಮೆಲ್ಲಗೆ, ಮತ್ತೊಮ್ಮೆ ದುಕ್ಕುದುಕ್ಕುಳಿಸುತ್ತಾ ಮಗದೊಮ್ಮೆ ಸೊರಸೊರೇನುತ್ತಾ ಅಳತೊಡಗುತ್ತಾನೆ.

ಇದನ್ನೆಲ್ಲ ನೋಡಿದ 'ಸಿದ್ದಿ'ಯ ತಡೆಯಲಾರದೆ ತನ್ನ ಜೀವನದ ಎಷ್ಟೋ ಸಂಕಟ, ಸಿಟ್ಟುಗಳಿಂದ ಚಿಟ್ಟು ಹಿಡಿದಿದ್ದವಳು. ಅವನ ಅಳು ಕೇಳಲಾರದೆ ಓಡಿಬಂದು 'ಹೂವ'ನ ಮೇಲೆ 'ಢಮಢಮ' ಎಂದು ನಗಾರಿ ಬಡಿದಂತೆ ಹೊಡೆಯುತ್ತಾ "ನಿಲ್ಸು ಸದ್ದಾ, ನಿಲ್ಸೂ. ನಿಲ್‌ಸ್ಲಾ ಸಾಯ್‌ಸ್‌ಬುಡ್ತಿನಿ ನೋಡು' ಎಂದು ಹಲ್ಲುಕಡಿಯುತ್ತಾ, ಎಷ್ಟಿದ್ದದು ನಿನ್ ತಿರಾಣ. ಮುಚ್ಚು ಬಾಯ... ಹ್ಞಾ! ನನ್ನೇ ತಳ್ಳಿಯ ನಿನ್ನಿಂದ ಇವತ್ತು ನಾ ಸತ್ರೂ ಸರಿಯೆ. ನಿನ್ನಳಾ ನಿಲ್ಲುಸ್ದೆ ಬಿಡೂದಿಲ್ಲ ಎಂದು ರೋಷದಿಂದ ಮೈಮೇಲಿನ ಪ್ರಜ್ಞೆ ತಪ್ಪಿದವಳಂತೆ ಆವೇಶಕ್ಕೀಡಾಗಿ 'ಹೂವ'ನ ಬಾಯನ್ನು ಬಿಗಿಯಿಡಿದು 'ಸಾಯಿ ಸಾಯಿ'[೮] ಯಾವ ಸುಕುಕ್ಕೆ ನಿನ್ನೆತ್ತುದ್ನೊ ಎಂದು ಅವನ ಮೃದುಕೊರಳ ಬಿಗಿಗೊಳಿಸಿದಳು.

"ಸಿದ್ದಿ"ಯ ಮಾತುಗಳು ಬದುಕಿನ ಹತಾಶೆಗೆ ಬಳಲಿ ಬೆಂಡಾಗಿ ತನ್ನ ನೋವಿನ ಅಳಲನ್ನು ವ್ಯಕ್ತಪಡಿಸುವುದು ದಲಿತ ಸಮುದಾಯದ ನೈಜವಾದ ವೇದನೆಯಾಗಿದೆ. ಈಕೆಯ ಬಾಳಲ್ಲಿ ನೆಮ್ಮದಿಯಾಗಿ ಬಾಳದೆ ಗಂಡನ ಒಲವು ಸಿಗದೆ ಚಡಪಡಿಸುತ್ತಾಳೆ. "ಎತ್ತ್ಮೇಲಾದ್ರು ಆಳಾದ್ ಗಂಡ ಅನ್ನಿಸ್ಕೋನು ಬಾಣಂತನಾ ಅಂತ ಒಂದಿನಾರೂ ಸೀಗ್ಡಿ ಕರ್ಮೀಯ ಅಂತಾ ತಂದ್ಕೊಡ್ಲಿಲ್ಲ, ಒಂದೆಣ್ಣೆ ಒಂದೂಟ ಅಂತಾ ಮಾಡ್ಲಿಲ್ಲ. ಯಾವ್ ನನ್ ಸವುತಿಯೂ ಎಂಗಿದ್ದೀಯಮ್ಮೀ ಅನ್ಲಿಲ್ಲಾ.."[೯] ಈಕೆಯ ಬಾಳಲ್ಲಿ ಸುಖದ ದಿವಸಗಳು ಒದಗಿ ಬರದೆ ನೋವಿನ ಸುಳಿಯಲ್ಲಿ ಕಣ್ಣೀರಿಡುತ್ತಾ ಬದುಕಿನ ಬಂಡಿಯನ್ನು ಸವೆಸುವುದನ್ನು ಕಥೆ ಅಭಿವ್ಯಕ್ತಪಡಿಸುತ್ತದೆ.

'ಹೂವ'ನ ಹಾವಭಾವಗಳನ್ನು ನೋಡುತ್ತ ಅವನ ತಾಯಿಯ ಕಣ್ಣೀರು ಹಾಕುತ್ತಾ, ಮಗನ ಹಿಂಸೆಯಿಂದ ಮಾನಸಿಕವಾಗಿ ಜರ್ಜರಿತಳಾಗುತ್ತಾಳೆ. ಅವನ ರಂಪವನ್ನು ಕಂಡು ಏನುಮಾಡಲಾರದೆ 'ತೊಟ್ಲಲಿದ್ದಾಗ್ಲೆ ಕತ್ ಚಿಮ್ಕಿ ಸಾಯಿಸ್‌ಬೇಕು ಅನ್ಕಂಡಿದ್ದೆ. ಏನ್ ಮಾಡ್ಲವ್ವಾ ಗ್ರಾಚಾರ ಹಿಡ್ಕಂದದೆ ಅವುನಿಂದ ನಾ ಬದ್ಕುವಂಗಿಲ್ಲ ಎಂದು ಹಣೆ ಚಚ್ಚಿಕೊಂಡು ಧಾರಂದಕ್ಕೆ ತಲೆ ಆನಿಸಿ ತದೇಕಚಿತ್ತದಿಂದ ಎತ್ತಲೋ ನೋಡುತ್ತಾ... ಈ ಮಗನಾ ಹೆರುವಾಗ ಎಂತಾ ಭಾದೆ ತಿಂದೆ, ಸತ್ತೇ ವೋಯ್ತಳೆ ಅಂತಾ ಎಲ್ರೂ ಅಂತಿದ್ರಲ್ಲಾ"[೧೦] ಎಂಬ ವೇದನೆಯ ಅಳಲನ್ನು ತೋರ್ಪಡಿಸುತ್ತಾಳೆ. ಈ ಅಂಶಗಳು ದಲಿತ ಸ್ತ್ರೀಯರ ದಯನೀಯ ಬದುಕನ್ನು ಕಟ್ಟಿಕೊಡುತ್ತವೆ. ದಲಿತ ಸಮುದಾಯದಲ್ಲಿ ಸ್ತ್ರೀ ಆಂತರಿಕ ಸಂಘರ್ಷದೊಡನೆ ಜೀವನವನ್ನು ನಿಭಾಯಿಸಿಕೊಂಡು ಮಾನಸಿಕವಾದ ಹಿಂಸೆಗೆ ಸಿಲುಕಿಕೊಂಡಿರುತ್ತಾಳೆ. ಕಥೆಯ

ಒಡಲಲ್ಲಿಸಿದ್ದಿಯು ತನ್ನ ಹುಟ್ಟಿನ ಬಗ್ಗೆ ಹತಾಶೆಯಿಂದ ಹೊರಹೊಮ್ಮುವ ರೋಷದ ಮಾತುಗಳು ಎಷ್ಟೋ ನೇಪಥ್ಯಕ್ಕೆ ಒಳಗಾಗಿರುವ ಶೋಷಿತ ಮಹಿಳೆಯರ ಮನೋವೇದನೆಯನ್ನು ತಿಳಿಸುತ್ತವೆ.

**'ಒಂದು ಹಳೇ ಚಡ್ಡಿ'** ಕಥೆಯಲ್ಲಿ ಮಹಿಳೆಗೆ ಇರುವ ಸ್ಥಾನಮಾನ, ಆಕೆಯ ಮೇಲೆ ನಡೆಯುವ ಶೋಷಣೆಯನ್ನು ಚಿತ್ರಿಸಲಾಗಿದೆ. 'ಸಿದ್ದಿ' ನಾಗರಾಜನಿಗೆ ಮೂರನೆಯ ಹೆಂಡತಿಯಾಗಿದ್ದು, ಈಕೆ ಮನೆಯ ಆಳಿನಂತೆ ದುಡಿಯುತ್ತಿರುತ್ತಾಳೆ. ಇವಳಿಗೆ ಯಾವುದೇ ಸ್ವಾತಂತ್ರ್ಯವಿಲ್ಲದೆ ಪಶುವಿನಂತೆ ಜೀವನ ಸಾಗಿಸುವುದು ಗಮನಾರ್ಹವಾದುದು. ಮಗನಾದ ಸೀನಿಗೆ ಚಡ್ಡಿ ಹಾಕಲಿಲ್ಲ ಎಂದು ಕೋಪಗೊಂಡ ನಾಗರಾಜ ಸಿದ್ದಿಯ ತಲೆಮುಡಿಯನ್ನು ಹಿಡಿದು ಆಕೆಯನ್ನು ಬಡಿಯುತ್ತಾನೆ. ಅವಳು ತನ್ನ ದುಃಖವನ್ನು ಎಲ್ಲರೆದುರು ತೋರ್ಪಡಿಸಿಕೊಳ್ಳಲಾರದ ಅಸಹಾಯಕಳಾಗಿ ಕಂಡುಬರುತ್ತಾಳೆ. ಗತಕಾಲದಿಂದಲೂ ಮಹಿಳೆಯರ ಮೇಲೆ ಪುರುಷರು ಯಾವ ದಯದಾಕ್ಷಿಣ್ಯವಿಲ್ಲದೆ, ಅವಮಾನಿಸುವಂತಹ ಕಟುಸ್ಥಿತಿ ಸಮಾಜದಲ್ಲಿ ನಿರ್ಮಾಣವಾಗಿದೆ.

"ನನ್ನ ಬದುಕೆಲ್ಲಾ ಇಂಥಾ ಒಂದು ಗೋಳೇ ಆಗಿ ಹೋಯಿತಲ್ಲಾ"[೧೧] ಎಂದು ಹೇಳುವ ಆಕೆಯ ನೋವಿನ ಮಿಡಿತಗಳು ಸಹೃದಯಿಗಳ ಮನಸ್ಸನ್ನು ಕಲಕಿಸುವಂತಹದ್ದು. ಈ ವಿಚಾರವಾಗಿ ನಾಗರಾಜನ ಸಂಸಾರದಲ್ಲಿ ಸಿದ್ದಿಯು ನೆಮ್ಮದಿಯಾಗಿರುವುದನ್ನು ಒಂದು ದಿನವಾದರೂ ಕಾಣಲಿಲ್ಲ ಎಂದು 'ಶಾಂತಿ'ಯು ಮರುಗುತ್ತಾಳೆ. 'ಸೀನಿ'ಯ ಚಡ್ಡಿ ವಿಚಾರವಾಗಿ ಶಾಂತಿಯು ಸಿದ್ದಿಯನ್ನು "ಅದೇನ್ ಚಿಕ್ಕಿ ವತಾರಿಂದ ಇದೆ ಆಯ್ತದಲ್ಲ, ಮದುವೆಗೆ ಬಂದೋರು ಏನಾಂತ ಅನ್ನಬೇಕು, ನೋಡಾಪ್ಪ ಇವರ ಬಾಳಂತ ಅಡ್ಕೋದಿಲ್ವೆ"[೧೨] ಎಂದು ತನ್ನ ಚಿಕ್ಕಮ್ಮನಿಗೆ ಹೇಳುತ್ತಾಳೆ.

"ಅಯ್ಯೋ, ನಿನಗ್ಯಾಕವ್ವ ಅವೆಲ್ಲ, ಗಂಡನ್ ಮನೆಗೋಳೋಳು ನೀನಾರು ಸುಖವಾಗಿರು..."[೧೩] ನನ್ನ ಮದುವೆಯಲ್ಲಿ ಇವರಾರು ಸರಿಯಾಗಿ ಸಂತೋಷವಾಗಿ ಇಲ್ಲವಲ್ಲ. ನಮ್ಮ ಅವ್ವ ಇದ್ದಿದ್ರೆ ಇವೆಲ್ಲ ಆಯಿತ್ತಿರಲಿಲ್ಲವೇನೋ, ಅದೂ ಅಲ್ಲದೆ ಈ ಹಾಳಾದ್ ನಮ್ಮ ಅಪ್ಪ ಹೆಂಡ ಕುಡಿದು ಅನ್ಯ ಸಂಬಂಧವನ್ನು ಬಯಸುವುದು ನಮ್ಮನ್ನು ಚಿಂತೆಗೀಡು ಮಾಡಿತ್ತು. ತಾಯಿಯನ್ನು ಕಳೆದುಕೊಂಡ 'ಶಾಂತಿ'ಯು ದುಃಖದ ಜೊತೆಗೆ ಮದುವೆಯ ಮನೆಯಲ್ಲಿ ಎಲ್ಲರೂ ನಮ್ಮ ಸ್ಥಿತಿಗತಿಗಳನ್ನು ನೋಡಿ ಬೇಸರಗೊಳ್ಳುತ್ತಾರೆಂಬ ಆತಂಕವನ್ನು ವ್ಯಕ್ತಪಡಿಸುತ್ತಾಳೆ.

ಗ್ರಾಮೀಣ ಮಹಿಳೆಯರಿಗೆ ತಮ್ಮ ಕುಟುಂಬದಲ್ಲಿ ಹೆಚ್ಚಿನ ಸಮಾನತೆಯನ್ನು ನೀಡುತ್ತಿರಲಿಲ್ಲ. ಇದು ಪುರುಷ ಸಮಾಜದ ಧಾರ್ಷ್ಟ್ಯವನ್ನು ಎತ್ತಿತೋರುತ್ತದೆ. ಕೇವಲ ಸಂಸಾರಕ್ಕೆ ಮೀಸಲಾಗಿ, ಯಾವ ಸ್ವಾತಂತ್ರ್ಯಗಳಿಲ್ಲದ ಚೌಕಟ್ಟಿನಲ್ಲಿ ಬದುಕುತ್ತಿರುವುದು ಮಹಿಳೆಯರ ಧಾರುಣ ಸ್ಥಿತಿಯಾಗಿದೆ. ದಿನವಿಡಿ ತ್ಯಾಗದಲ್ಲಿಯೇ ತನ್ನ ಇರುವಿಕೆಯನ್ನು ತೋರ್ಪಡಿಸುತ್ತ ಈಕೆಯು ಆಕ್ರಂದನವನ್ನು ಹೊರಹೊಮ್ಮಿಸುತ್ತಾಳೆ. ಕಥೆಯಲ್ಲಿ ಪುರುಷರ ಪಾರುಪತ್ಯಕ್ಕೆ ಒಳಗಾದ ಸ್ತ್ರೀಯರ ನೋವಿನ ಹಂಬಲತೆಯನ್ನು ಕತೆಗಾರರು ಸೋದಾಹರಣವಾಗಿ ಚಿತ್ರಿಸಿದ್ದಾರೆ. ದಲಿತರೆ ತಮ್ಮ ಮಹಿಳೆಯರನ್ನು ಹಿಂಸಿಸುವ ಸ್ಥಿತಿ ಈ ಕಥೆಯ ಮತ್ತೊಂದು ವಿಶೇಷವಾಗಿದೆ.

## ಮೋಚಿಯ ಗಂಗೆ

'ಮೋಚಿಯ ಗಂಗೆ' ಕಥೆಯಲ್ಲಿ ದಲಿತರ ಬದುಕು ಬವಣೆಗಳ ಆಯಾಮವನ್ನು ಸೂಚಿಸುತ್ತದೆ. ಕಥೆಯಲ್ಲಿ ಒಬ್ಬ ದಲಿತನ ಜೀವನದ ಕ್ರಮ ಮತ್ತು ಆತನ ಸಂಸ್ಕೃತಿಯನ್ನು ಸಮಾಜದ ನಡುವೆ ಇಟ್ಟು ನೋಡುವ ಒಂದು ಪ್ರಯತ್ನವಾಗಿದೆ. ಆತ ಯಾವ ಮನೆಯನ್ನು ಆಶ್ರಯಿಸದೆ ಪ್ರಕೃತಿಯ ಮಡಿಲ ಒಂದು ತೋಪಿನಲ್ಲಿ ತನ್ನ ಕಾಯಕದಲ್ಲಿ ತೃಪ್ತಿಯನ್ನು ಕಾಣುತ್ತಾನೆ. ಈತ ಆಕಾಶದ ಸೂರ್ಯ- ಚಂದ್ರರಿಗೆ ತನ್ನ ಆತ್ಮವನ್ನು ಸುಲಿದು ಚಮ್ಮಾಳಿಗೆ ಮಾಡಿಕೊಡುವ ಮಹಾಕನಸನ್ನು ಹೊಂದಿದ್ದ ಇವನು ಅಸಾಧಾರಣ ಚರ್ಮಕಾರನಾಗಿದ್ದು, ತನ್ನ ಬದುಕನ್ನು ಮರದ ತೋಪಿನಲ್ಲಿಯೇ ನಡೆಸುತ್ತಿರುತ್ತಾನೆ. ಆ ಹಾದಿಯಲ್ಲಿ ಬಂದ ಒಬ್ಬ ಕಾಶಿ ಯಾತ್ರಿಕನಿಗೆ ನನ್ನ ಮಗಳು ಗಂಗೆಗೆ ಹರಿಸಿಣ ಕುಂಕುಮ ಎಲೆ ಅಡಿಕೆಯ ಮುತ್ತೈದೆ ಹರಕೆಯನ್ನು ಕೊಡಿ ಎಂದು ಹೇಳಿ, ಅದರಂತೆ ಆ ಯಜಮಾನ ಗಂಗೆಗೆ ಅರ್ಪಿಸಿ ಆಕೆಯಿಂದ ಚಿನ್ನದ ಬಳೆಯನ್ನು ಕದ್ದು ತರುತ್ತಾನೆ. ಅದನ್ನು ಹರಾಜು ಹಾಕುವ ಸಂದರ್ಭದಲ್ಲಿ ಅದರ ಸುಳಿವು ತಿಳಿದು ತಡೆಯೊಡ್ಡುತ್ತಾನೆ. ಅಲ್ಲಿ ಈ ಮುದುಕನಿಗೆ ಯಾವ ಆಧ್ಯತೆಯನ್ನು ಕೊಡದೆ ತಿರಸ್ಕರಿಸುತ್ತಾರೆ. ದಲಿತ ಸಮುದಾಯಗಳು ಗಾಢವಾಗಿ ನಿಸರ್ಗವನ್ನು ನಂಬಿಕೊಂಡು ಬದುಕಿದವು. ಅದರ ಅಪಾರ ಗುಣವು ದಲಿತ ಸಂಸ್ಕೃತಿಗಳಲ್ಲಿ ಬೆಳೆದಿದೆ. ಸಂಸ್ಕೃತಿಯ ನೆನಪುಗಳ ಅವರವರ ಆಚರಣೆಗಳಾಗಿ ರೂಪಾಂತರಗೊಳ್ಳುತ್ತಿರುತ್ತವೆ. ಇಲ್ಲಿ ಕೆರ ಹೊಲೆವ ಒಬ್ಬ ದಲಿತ ತನ್ನ ಕಾಯಕದಲ್ಲಿ ಜೀವನವನ್ನು ರೂಪಿಸಿಕೊಂಡಿರುತ್ತಾನೆ. ಅವನ ಜೀವನ ಪದ್ಧತಿ, ನಂಬಿಕೆ ಇವು ಅವನಿಗೆ ಪದ್ಧತಿಯಾಗಿರುತ್ತದೆ. ಆ ಚಪ್ಪಲಿಯನ್ನು ಈತ ದೇವರು ಎಂದು ನಂಬಿರುತ್ತಾನೆ. ಹನ್ನೆರಡನೆಯ ಶತಮಾನದಲ್ಲಿ ಇಂತಹ ಒಂದು ವೃತ್ತಿಯಾಧಾರಿತ ಸಂಕೇತವಾಗಿ ಕೆಲವು ವಚನಕಾರರು ಕಂಡುಬರುತ್ತಾರೆ. ಅದರಲ್ಲಿ

ವಚನಕಾರರಲ್ಲಿದ್ದ ಹರುಳಯ್ಯ, ಇನ್ನಿತರನ್ನು ಗಮನಿಸಬಹುದು. ಚಪ್ಪಲಿಯನ್ನು ಹೊಲೆಯುವ ಜನಾಂಗ ಇಂದು ಆಧುನಿಕತೆಗೆ ಸಿಲುಕಿ ಬದಲಾವಣೆಯನ್ನು ಕೊಂಡುಕೊಳ್ಳುತ್ತಿದೆ. ತನ್ನ ಕುಶಲತೆಯಿಂದ ಸುಂದರ ಆಕೃತಿಯನ್ನು ನೀಡಿ ಅದನ್ನು ಲಿಡ್‌ಕೇರ್‌ನಂತಹ ಒಂದು ವ್ಯವಹಾರಿಕ ಕೇಂದ್ರ ಅವರಿಂದ ಕಡಿಮೆ ಬೆಲೆಗೆ ಖರೀದಿಸಿ ಲಾಭವನ್ನು ಪಡೆಯುತ್ತಿವೆ. ಮತ್ತು ಜನರ ಬದುಕಿನ ಕ್ರಮವನ್ನು ಬದಲಾಯಿಸುತ್ತಿವೆ.

ಕಥೆಯಲ್ಲಿ ಕಾಣಿಸುವ ದಲಿತ ಸಂಪ್ರದಾಯ, ಪ್ರಧಾನ ತತ್ವ ಜಲದ ನೀತಿಯನ್ನು ಹೊಂದಿರುತ್ತದೆ. ಸಂಸ್ಕೃತಿಗಳು ಸೃಜನಶೀಲವಾಗಿರುವುದು ಜಲದ ಕಣ್ಣಿಂದಲೇ ಅಂದರೆ ಪುನರ್ ಸೃಷ್ಟಿಗೆ ಹದವಾದ ಮಾನಸಿಕ ಸ್ಥಿತಿಯು ಸದಾ ಅಂತರ್ ಜಲದಂತೆಯು ಆಕಾಶದ ಮುಗಿಲಿನಂತೆಯೂ ಇರುತ್ತದೆ. ಪ್ರಕೃತಿಯ ನಿಷ್ಪವಾದ ಈ ಗುಣವು ಸಂಪ್ರದಾಯಗಳಲ್ಲಿ ಸಾಕಷ್ಟು ಪರಂಪರೆಗಳನ್ನು ಹೆಮ್ಮರವಾಗಿಸಿದೆ, ಕಥೆಯಲ್ಲಿ ಕಾಣಿಸುವ ಗಂಗೆಯು ಆ ಮುದುಕನ ಮಗಳಾಗಿ ಆತನ ರಕ್ಷಣೆಯಲ್ಲಿ ಭಾಗಿಯಾಗುತ್ತಾಳೆ. ಜಲದ ಸಂಕೇತವಾಗಿ ಆಕೆ ಸಮಾಜ ಎಂಬ ಪರಿಸರದ ಕೊಳಕನ್ನು ತೊಳೆಯುವಂತಹ ಶಕ್ತಿಯಾಗಿ ಕಾಣಿಸುತ್ತಾಳೆ. ಹಿಂದುತ್ವದ ಕಿಡಿಜ್ವಲೆಯ ಎದುರು ಚಲಿತರು ಬದುಕುಳಿದಿದ್ದು ಜಲತತ್ವದ ರಕ್ಷಣೆಯಿಂದಲೇ ಜಲಾರಾಧನೆ ದಲಿತರಲ್ಲಿ ವಿಶೇಷ. ಚಪ್ಪಲಿ ಹೊಲೆಯುವವನು ಗಂಗೆಯನ್ನು ಮಗಳಂತೆ ಭಕ್ತಿಯಿಂದ ಪೂಜಿಸುತ್ತಾನೆ. ಜಲದೇವತೆಯ ಬಗ್ಗೆ ದಲಿತ ಪರಂಪರೆಯು ಬಹು ರೂಪಗಳಲ್ಲಿ ಧ್ವನಿಸುತ್ತದೆ, ಜಲತತ್ವದಲ್ಲಿ ಬೆಳೆದ ದಲಿತ ಪರಂಪರೆಯು ಸಾಗರ ಮುಖಿಯಾದುದ್ದು. ಎಲ್ಲಾ ನದಿಗಳು ಹರಿದು ಸಮುದ್ರವನ್ನು ಸೇರುವಂತೆ ದಲಿತ ಸಂಸ್ಕೃತಿಯು ವಿರಾಟ ಜಲರೂಪದಲ್ಲಿ ಪ್ರತಿಯೊಂದು ಸಮುದಾಯದ ದಾಹಕ್ಕೂ ಸೇವೆಯ ನೀರುಣಿಸಿದೆ, ಎಲ್ಲಾ ಜಾತಿಗಳೂ ದಲಿತ ಸಂಸ್ಕೃತಿಯ ಮೇಲೆ ಹಲ್ಲೆ ಮಾಡಿದರೂ ಯಾವ ಜಾತಿಯ ವಿರುದ್ಧವಾಗಿಯೂ ದಲಿತ ಸಂಸ್ಕೃತಿಯು ಕೇಡನ್ನು ಬಯಸುವುದಿಲ್ಲ. ಹರಿವ ನೀರನ್ನು ಹಳಿದರೆ ಅದು ನಿಂತು ಬಿಡುವುದಿಲ್ಲ. ಹರಿವ ತನ್ನ ಪಾಡಿನ ಕಾಯಕವನ್ನು ಅದು ಮಾಡುತ್ತಲೇ ನಿರಂತರವಾಗಿ ಸಾಗುತ್ತಿರುತ್ತದೆ. ಹಾಗೆಯೇ ಕಥೆಯಲ್ಲಿ ದಲಿತನ ಜೀವನದ ಸಂಪ್ರದಾಯದ ಜಲದಂತೆ ಕಾಣಿಸಿಕೊಂಡು ಬರುತ್ತದೆ.

ಸಾವಿರಾರು ಕತ್ತಿಗಳು ಅವನ ಆದಿಮದ ತೊಗಲನ್ನು ಹರಿದು ಹಾಕಿದವು. ಕಾಲಾಂತರದ ಅವನ ನೆತ್ತರನ್ನು ಬಸಿದು ಕೇಕೆ ಹಾಕಿದರು. ಅವನು ಗಂಗೆಯನ್ನು ಆಗಲೂ ಕೂಗುತ್ತಾ ಇಲ್ಲಿ ನನ್ನೆದೆಗೆ ಇವರೆಡೆಗೆ ಈ ಮಣ್ಣಿನಾಳದಿಂದ ಚಿಮ್ಮಿ ಉಕ್ಕಿ ಬಾ ಮಗಳೇ ನೆತ್ತರಿನ ಈ ನೆಲವನ್ನು ತೊಳೆಯ ಬಾ ಮಗಳೇ ಎಂದು ಅಂಗಲಾಚುತ್ತಿದ್ದ. ಮುದಿಮಾದಿಗನ

ನೆತ್ತರು ಆವಿಯಾಗಿ ಗಾಳಿಯಲ್ಲಿ ಮಿಂಚಿನಂತೆ ಹಾರಿಹೋಗಿ ದೂರದ ಗಂಗೆಯಲ್ಲಿ ಲೀನವಾಯಿತು. ಅವನ ನೆತ್ತರು ಗಂಗೆಯಲ್ಲಿ ಬಿದ್ದೊಡಲೇ ಆ ಮಗಳು ಗಂಗೆ ಅಲ್ಲೋಲಕಲ್ಲೋಲವಾದಳು. ಸಿಡಿದಬ್ಬರಿಸಿ ಮೊರೆದು ಪ್ರವಾಹವಾಗಿ ಉಕ್ಕಿ ಹರಿದಳು. ಹಂಬಲ ತುಂಬಿರುವ ಗಂಗಾ ನದಿಯ ಬಯಲ ತುಂಬ ಮುದುಕನ ನೆತ್ತರು ಚಾಚಿಕೊಂಡಿದೆ. ಭೂಮಿಯಾಳಕ್ಕು ಇಳಿದು ಜಲದ ಕಣ್ಣಲ್ಲಿ ಐಕ್ಯವಾಗಿದೆ. ಏಳು ಹಗಲೂ ಏಳು ರಾತ್ರಿಗಳೂ ಗಂಗೆ ಸೂತಕವಾಗಿ ಮಹಾಮಳೆಯನ್ನು ತಂದುಕೊಂಡು ದುಃಖದ ಅಲೆಗಳಲ್ಲಿ ಸಾಗಿ ದಿಗಂತದುದ್ದಕ್ಕೂ ಇರುವ ಬಯಲನ್ನು ವ್ಯಾಪಿಸಿಕೊಂಡಿದ್ದಾಳೆ, ಮುದುಕನನ್ನು ಮುಗಿಸಿ ಅವರೆಲ್ಲ ಕತ್ತಲ ದವಡೆಯಲ್ಲಿ ಎಲ್ಲೊ ಸಿಲುಕಿ ಕೊಂದ ಸಂಭ್ರಮದ ಕನಸನ್ನು ಒಡೆದ ಮನದ ಕನ್ನಡಿಯ ಛಿದ್ರತೆಯಲ್ಲಿ ಕಂಡಿದೆ.

ವಿಕೃತಿಯ ಆನಂದ ತನ್ನ ತೊಟ್ಟಿಲಲ್ಲಿ ಅವರನ್ನು ತೂಗುತ್ತಿತ್ತು. ಅಲ್ಲಿ ಗಂಗೆ ಹುಚ್ಚಾಗಿ ಹರಿಯುತ್ತಿರುತ್ತಿದ್ದಾಳೆ. ಮುಗಿಯದ ಅನಂತ ದುಃಖವಾಗಿ ಆ ಗಂಗೆ ಭೂಮಿಯಗಲಕ್ಕೂ ಜಲದ ಸೂಲಾಗಿ ಹರಿಯುತ್ತಾ ಪ್ರತಿವರ್ಷವೂ ತಂದೆ ಸತ್ತ ದಿನ ಬಂದಾಗ ಭೋರ್ಗರೆಯತೊಡಗಿರುತ್ತಾಳೆ. ಆ ಮುದುಕನ ನೆತ್ತರು ಗಂಗೆಯ ಮೂಲಕ ಅಪಾರ ಬಯಲಿನ ಬೆಳೆಗಳಲ್ಲಿ ಬೆರೆತು ಅಲ್ಲಿಂದ ಮತ್ತೆ ಒಬ್ಬೊಬ್ಬರ ರಕ್ತವನ್ನೂ ಹಿಂತಿರುಗಿ ಸೇರಿಕೊಂಡಿತ್ತು. ಹಸಿರು ಮರಗಿಡ ಬಳ್ಳಿಗಳ ನೆರಳಲ್ಲಿ ಅವುಗಳ ಕಂಪಲ್ಲಿ, ರಸದಲ್ಲಿ, ಚೆಲುವಲ್ಲಿ ಎಂದೆಂದೂ ಹೊಂದಿ, ಐಕ್ಯವಾಗಿರುತ್ತಾನೆ. ಸುರಿಯುತ್ತಿದ್ದ ಕತೆಯ ಮಳೆ ನಿಂತುಹೋಯಿತು. ಆ ಮಳೆಯ ಜೀವದಲ್ಲಿ ನಾವೆಲ್ಲ ತೋಯ್ದುಹೋಗಿದ್ದೆವು. ಆ ಮುದಿಯಜ್ಜ ನಮ್ಮ ಪೂರ್ವಿಕನೆಂದು ಹೆಮ್ಮೆಯಾಗಿದೆ. ಆದರೂ ಆ ನಡುವೆ ಬೆಳದಿಂಗಳ ಮರೆಯಲ್ಲೂ ಬೀಸಿ ಬರುತ್ತಿದ್ದ ಇಂಪಾದ ಗಾಳಿಯಲ್ಲೂ ಎಂದೆಂದಿನದೊ ದಹನದ ಕರಕಲು ವಾಸನೆ ಬಡಿದು ನಮ್ಮನ್ನು ಎಚ್ಚರಿಸಿದೆ. ನಾವು ಮತ್ತೆ ನಾಳಿನ ಕನಸಿಗೂ ಮುಖಾಮುಖಿಗೂ ಕತೆಯ ಮಳೆಗೂ ಸಜ್ಜಾಗುತ್ತಿದ್ದೊ ಎಂದು ಕಥೆಗೆ ಅಂತ್ಯ ಹೇಳಿದ ಲೇಖಕರ ಬರೆಹ ಬಲು ವಿಶಿಷ್ಟತೆಯಿಂದ ಕೂಡಿದೆ. ಕಥೆಯಲ್ಲಿ ದಲಿತರ ಬದುಕು, ಬವಣೆಯಲ್ಲಿ ಆಗುವ ತೊಡಕುಗಳನ್ನು ಮತ್ತೆ ಆಚಾರ, ವಿಚಾರ, ನಂಬಿಕೆಯನ್ನು, ಲೇಖಕರು ಅಭಿವ್ಯಕ್ತಿಸುತ್ತಾರೆ. ಬಡತನದಲ್ಲೂ ಸಿರಿತನ ಕಾಣುವ ದಲಿತರ ಜೀವನವನ್ನು ಸ್ಪಷ್ಟಪಡಿಸುವ ಮುಖಾಂತರ ಕಥೆಗೆ ಜೀವತುಂಬಿದ್ದಾರೆ.

ಕಥೆಯಲ್ಲಿ ವಿಶಿಷ್ಟವೆಂದರೆ ನವನವೀನತೆ ಎಂಬಂತೆ ಬದಲಾವಣೆ ಹೊಂದುವ ದಲಿತರ ಜನಾಂಗದ ಮತ್ತೊಂದು ನೆಲೆಯಾಗಿ ಕಾಣುತ್ತದೆ. ನಿವೇದಕರು ಚಪ್ಪಲಿ

ಹೊಲೆಯುವ ಜನಾಂಗದ ಬದುಕಿನ ಸುತ್ತ ಕಥೆಯನ್ನು ಕಟ್ಟಿ ಅದಕ್ಕೆ ರೂಪಕೊಟ್ಟು, ಸಮಸ್ಯೆಗಳೆತ್ತ ಸಂಸ್ಕೃತಿಯನ್ನು ಇಟ್ಟು ಕಥೆಗೆ ಉಸಿರು ನೀಡಿರುವುದನ್ನು ಕಾಣುತ್ತೇವೆ.

**'ಅತ್ತೆ'** ಕಥೆ, ಪರ್ಸಂಗ ಹೇಳತ್ತೆ ಎಂದು ಕಥೆಯನ್ನು ಆರಂಭಿಸುತ್ತ ಕಥೆಗಾರರು ತನ್ನ ಅತ್ತೆಯರು ಮತ್ತು ಅವ್ವ ಹೇಗೆ ಅಸಹಾಯಕರಾಗಿ ಗಂಡನ ಶೋಷಣೆಗೆ ಒಳಗಾಗಿ ಜೀವನ ನಡೆಸುವಂತಹ ದುಃಸ್ಥಿತಿಯನ್ನು ಮುಂದಿಡುತ್ತಾರೆ. ಇಂತಹ ಎಷ್ಟೋ ಮಹಿಳೆಯರ ಬಾಳಿನ ಕತ್ತಲೆಯ ಲೋಕವನ್ನು ಈ ಕತೆಯ ಮೂಲಕ ಓದುಗರ ವಲಯಕ್ಕೆ ನೀಡುತ್ತಾರೆ. ಗಂಡನ ಮನೆಯಿಂದ ದೂರವಾಗಿ ತವರು ಮನೆಗೆ ಸೇರಿದ ಆಕೆಯ ಬಾಳಿನ ಆಸೆ ಈಡೇರದೆ, ಸಂಕಷ್ಟಕ್ಕೆ ತುತ್ತಾಗಿ ಜೀವನವೆಂಬ ಯಾನಕ್ಕೆ ಸಿಲುಕಿ ಎಲ್ಲೋ ಮರೆಯಾಗುವಂತದ್ದು.

ಈಕೆಯು ದೊಡ್ಡತ್ತೆ ಗಂಡನ ಒಡೆತಗಳನ್ನು ತಾಳಲಾರದೆ, ತವರಿಗೆ ಬಂದು ಎಲ್ಲರ ದೃಷ್ಟಿಯಲ್ಲೂ ಅಪಮಾನಕ್ಕೆ ಈಡಾಗುತ್ತಾಳೆ. ಅತ್ತೆಗೆ ಊರಿನ ಹೆಂಗಸರು ಕೂಡ ಛೀಮಾರಿ ಹಾಕಿ "ಗಂಡನ್ ಬಿಟ್ ಬಂದಲ್ಲಾ ಮಿಂಡನ್ ಎಲ್ ಕಳ್ಸಿದ್ದಿಯಮ್ಮೀ"[೧೪] ಎಂದು ಅವಳನ್ನು ಹಂಗಿಸುತ್ತಿದ್ದರು. ಇವಳನ್ನು ಕುಟುಂಬದವರು ಗಂಡನ ಮನೆಗೆ ಹೋಗು, ಇಲ್ಲದಿದ್ದರೆ ಯಮನ ಪಟ್ಟಣಕ್ಕೆ ಬೇಕೆಂದರೆ ಇಲ್ಲಿಗೆ ಬಾ ತಾಕಿತ್ತು ಮಾಡಿ ಕಳಿಸಿದ್ದರು. ಅತ್ತೆ ಕೊನೆಗೆ ಗಂಡನ ಮನೆಗಿಂತ ಯಮನ, ಈ ತಾಯಿ ಮನೆಯೇ ಸುಖವೆಂದು ಒಂದು ತಿಂಗಳಲ್ಲೇ ಓಡಿಬಂದಳು. ಈ ಮಾತುಗಳು ಪುರುಷರ, ಊರಿನ ಸ್ತ್ರೀಯರು ಅತ್ತೆಯ ಬಗ್ಗೆ ಹಂಗಿಸುವ ಅವರ ಕಟುನುಡಿಗಳನ್ನು ನೋಡಿದರೆ ಎಂಥವರಿಗೂ ಮನಸ್ಸು ಕಲಕುವಂತಿದೆ.

ಸಮಾಜದಲ್ಲಿ ಇಂತಹ ಘಟನೆಗಳು ವಾಸ್ತವದಲ್ಲಿವೆ. ಪಿತೃಪ್ರಧಾನವಾದ ಸ್ಥಾನದಲಿದ್ದ ಅತ್ತೆಯ ತಂದೆಯೇ ಮಗಳನ್ನು ಹೊಡೆದು ದರದರ ಎಳೆಯುತ್ತಾ ಮಾರಿಗುಡಿಯವರೆಗೆ ಎಳೆತಂದುಬಿಡುವ ಸಂದರ್ಭವನ್ನು ನೋಡಿದರೆ, ಆಕೆಗೆ ಇನ್ನೆಲ್ಲಿ ಜೀವಿಸಲು ಆಧಾರ ದೊರೆಯುತ್ತದೆ, ಎಂಬ ಪ್ರಶ್ನೆ ಕಾಣುತ್ತದೆ. ಅವಳ ಹುಟ್ಟಿನ ಶಾಪವೋ ಇಲ್ಲ ತಂದೆ ತಾಯಿಗಳ ದುರಾದೃಷ್ಟವೋ ಎನ್ನುತ್ತಾ ಅತ್ತೆಯು ಸಂಕಷ್ಟದ ಕುಲುಮೆಗೆ ಸಿಲುಕಿರುತತಾಳೆ. "ನನ್ನ ಕತ್ತ ಕೂದ್ರೂ ಸರಿಯೇ ನಾ ಮಾತ್ರ ಗಂಡನ್ ಮನೆಗೆ ವೋಗೋದಿಲ್ಲ"[೧೫] ಎಂದು ಅತ್ಯಂತ ಕರುಣಾಮಯವಾಗಿ ರೋದಿಸುತ್ತಾ ಅತ್ತೆ ಕುಂತೇಬಿಟ್ಟಳು.

ನೋವಿನ ಮಾತುಗಳನ್ನಾಡುವ ಮತ್ತು ಆಕೆ ತೊಳಲಾಡುವ ಸಂಕಟದ ಪರಿಯನ್ನು ಕಣ್ಣಿಗೆ ಕಟ್ಟುವಂತೆ ಕಥೆಗಾರರು ನಿರೂಪಿಸಿದ್ದಾರೆ. ಗರ್ಭದಲ್ಲಿಯೇ ಹೆಣ್ಣು ಎಂಬ ಕಾರಣದಿಂದ ಆಕೆಯನ್ನು ನಿಸರ್ಗಕ್ಕೆ ಕರೆತರಲು ಹಿಂದೇಟುಹಾಕುತ್ತಾರೆ. ಸ್ತ್ರೀಗೆ ಇದೊಂದು ಶಾಪದಂತಾಗಿದೆ, ಸಮಾಜದಲ್ಲಿ ಮಹಿಳೆ ತವರು ಮನೆಯಲ್ಲಿ, ಗಂಡನ ಮನೆಯಲ್ಲಿ ಒಂಟಿ

ಜೀವನವನ್ನು ಕಟ್ಟಿಕೊಳ್ಳಲು ಬಿಡದ ಈ ಪುರುಷ ಪ್ರಧಾನ ಸಮಾಜವು ಸ್ತ್ರೀಯರನ್ನು ದಂಡಿಸುತ್ತಾ ಬಂದಿದೆ. ಕಥೆಯಲ್ಲಿ ಕತ್ತಲಲ್ಲಿ ಮರೆಯಾದ ಅತ್ತೆಯನ್ನು ನೋಡುತ್ತಾ, ಇಂತಹ ಎಷ್ಟೊ ಜನರ ಕತ್ತಲ ಜೀವನವನ್ನು ಅತ್ತೆ ಕಥೆ ಅಭಿವ್ಯಕ್ತಿಸಿದೆ.

**'ಕಿಚ್ಚು'** ಕಥೆಯ ಸಾಕಕ್ಕ ಸ್ವಾಭಿಮಾನದ ಬದುಕನ್ನು ಕಟ್ಟಿಕೊಳ್ಳಲು ಹವಣಿಸುತ್ತಿರುವಾಗ ತನ್ನ ಸುತ್ತಮುತ್ತಲಿನಲ್ಲಿರುವ ಜನರು ಆಕೆಯನ್ನು ನಿಂದಿಸುವುದರ ಜೊತೆಗೆ ಅವಳನ್ನು ನೋಡುವ ದೃಷ್ಟಿಕೋನವು ನಕರಾತ್ಮಕವಾದ ಭಾವನೆಯಿಂದ ಕೂಡಿರುತ್ತದೆ. ಭುಜಗಣ್ಣನ ಹೊಟೇಲ್‌ನಿಂದ ಟೀ ತರುವ ಸಂದರ್ಭದಲ್ಲಿ ಪುಟ್ಟಿಯನ್ನು ಕರಿಯಣ್ಣನು "ಓಹೋ ಬೆಳಿತಾವ್ಳೆ ನೋಡ್ರಪ್ಪಾ ಬಿತ್ನೆ ಮಗಳು, ವಯ್ಸುಕ್ ಬಂದ್ ಮ್ಯಾಕೆ ಸರಿಯಾದ್ ಯಣ್ಣಾಯ್ತದೆ ಕನ್ರೋ ಎಂದು ಛೇಡಿಸಿದ".[೧೬]

ಈ ಮಾತನ್ನು ಕೇಳಿದ ಪುಟ್ಟಿಯು ಅಸಹನೆಯಿಂದ ಮನೆಗೆ ಬಂದು ಅವ್ವನ ಬಗ್ಗೆ ಗಂಡಸರು ಆಡಿದ ಮಾತುಗಳನ್ನು ತಿಳಿಸುತ್ತಾಳೆ. ಇದಕ್ಕೆ ಸಾಕಕ್ಕ ಪ್ರತಿಕ್ರಿಯಿಸುತ್ತಾಳೆ. "ಅಯ್ಯೋ ತತ್ತಾ, ಯಾವ್ ನನ್ ಅಳ್‌ಮಗ ಏನಾರ ಅನ್ಕಲಿ, ತನ್ನೆಂಡ್ತಿ ಏನ್ ಸಾಚಾ ಅಂತಾ ಮಾತಾಡ್ತಿದ್ನೆನೊ. ಹಾಳಾದ್ ವೂರೆಲಿ ಯಂಗ್ ಬದ್ಕಿದ್ರು ತಪ್ಪು ಕನಾ"[೧೭] ಎಂದು ಹೇಳುತ್ತಾ ಅಸಹಾಯಕದ ನಡುವೆಯು ರೋಷದಿಂದ ಮಾತನಾಡುತ್ತಾಳೆ. ನಮ್ಮ ಸಮಾಜದಲ್ಲಿ ಹೆಣ್ಣಿನ ಬಗ್ಗೆ ತುಚ್ಚವಾಗಿ ಮಾತನಾಡುತ್ತಿದ್ದರೆ, ಎಂದರೆ ಪುರುಷರಿಂದಲೇ ಗೌರವಕ್ಕೆ ಪಾತ್ರಳಾಗಬೇಕಾದ ಮಹಿಳೆ, ಇವರಿಂದಲೇ ಅಪಮಾನಕ್ಕೆ ಈಡಾಗುವ ದುರಂತ ಸಂಗತಿಯನ್ನು ಕತೆಯಲ್ಲಿ ಕಾಣುತ್ತೇವೆ. ಅಂಧಕಾರದಲ್ಲಿ ತುಂಬಿದ ಈ ಸಮಾಜದಲ್ಲಿ ಹೆಣ್ಣು ತನ್ನ ಇಚ್ಛೆಯಂತೆ ಬದುಕುವಂತಹ ದಿನಗಳಿಗಾಗಿ ಕಥೆಗಾರರು ಬದಲಾವಣೆ ಭವಿಷ್ಯತ್ ಕಾಲಕ್ಕೆ ದಾರಿ ಮಾಡಿಕೊಟ್ಟಿದ್ದಾರೆ.

ಈ ಕಥೆಯಲ್ಲೂ ಕೂಡಾ ದಲಿತರೇ ತಮ್ಮ ಮಹಿಳೆಯನ್ನು ಹಿಂಸಿಸುವ ಮತ್ತೊಂದು ಮಗ್ಗಲು ಅನಾವರಣಗೊಂಡಿದೆ. ಸಾಕಕ್ಕನು ತನ್ನ ಕುಟುಂಬದ ನಿರ್ವಹಣೆಗಾಗಿ ಕಡಲೆಕಾಯಿಯನ್ನು ಬಿಡಿಸುವ ಕೆಲಸಕ್ಕೆ ಹೋಗುವುದು, ಹಾಗೆ ಕುಟುಂಬವನ್ನು ನಿಭಾಯಿಸಲು ವಿಧವೆಯಾದ ಸಾಕಕ್ಕನನ್ನು ತನ್ನ ಮೈದುನನ ಜೊತೆ ಅಕ್ರಮ ಸಂಬಂಧವನ್ನು ಇಟ್ಟುಕೊಂಡಿರುತ್ತಾಳೆ. ಇಂತಹ ಹಲವಾರು ಸಂಗತಿಗಳು ಬೆಳಕಿಗೆ ಬರದೆ ನೇಪಥ್ಯಕ್ಕೆ ಸರಿಸುವುದರೊಂದಿಗೆ ವಿಧವೆ ಬಾಳು ಸಮಾಜದಲ್ಲಿ ಬೇರು ಬಿಟ್ಟಿರುವುದನ್ನು ಕಾಣುತ್ತೇವೆ.

ಈ ವಿಚಾರವಾಗಿ ದೊಡ್ಡಮಾರ ಎಂಬ ವ್ಯಕ್ತಿಯು ಕುಡಿದು ಚಿತ್ತಾಗಿ "ಅವುಳಾ ಬಿಟ್ಟೇನೇ ನಾನು, ನನುಗೇ ಮೊದ್ಲಿಂದ್ಲು ಅನುಮಾನಿಸ್ತು, ಇಂತಾ ಬೊಡ್ಡಿ ಸೂಳೆಯ ಊರಲಿ

ಇರುಸ್‌ಬಾರದು..."[೧೮] ಎಂದು ತೊದಲಾಡತೊಡಗಿದ. ಪರಂಪರೆಯಿಂದಲೂ ಹೆಣ್ಣನ್ನು ನಿಂದಿಸುತ್ತ ಬಂದಿರುವ ಪುರುಷ ಸಮಾಜವು, ದಲಿತ ಸ್ತ್ರೀಯರ ಮೇಲೆ ಅಸಹ್ಯಕರವಾಗಿ ಮಾತನಾಡುವುದು ಕಂಡುಬರುತ್ತದೆ. ಸಾಕಕ್ಕ ಮತ್ತು ಚಿಕ್ಕೀರಿ ಜೀವನವನ್ನು ನಡೆಸಲು ಯಾವ ಸೌಲಭ್ಯವು ದೊರೆಯದಿದ್ದಾಗ, ಅನೈತಿಕ ಹಾದಿಯಲ್ಲಿ ಹೋಗುವುದನ್ನು ಕಾಣುತ್ತೇವೆ.

"ಅಯ್ಯೋ ಬಾ, ಸೀಮ್‌ಗಿಲ್ದ ಕೇಮೆ ಮಾಡೆವೆ ನಾವು. ಎಲ್ರು ಮಾಡುದ್ನೇ ನಾವು ಮಾಡುದು ಕನಾ. ಕಟ್ಕಂದೋರು ಮಟ್ಟವಾಗಿದ್ರೆ ನಾವ್ಯಾಕ್ ಅತ್ತಾಗಿತ್ತಾಗೆ ವೋದೇವು"[೧೯] ಎಂದು ಹೇಳುತ್ತಾಳೆ. ಇದು ಕೇವಲ ಸಾಕಕ್ಕನ ಜೀವನದ ಮಾರ್ಗೋಪಾಯವಲ್ಲ, ಇವಳಂತ ಹಲವಾರು ಮಹಿಳೆಯರು ಬದುಕನ್ನು ಕಟ್ಟಿಕೊಂಡಿರುವ ಮಾರ್ಗವಾಗಿದೆ. ಆಕೆ ತನ್ನ ಮೈದುನನ ಜೊತೆ ಸಂಬಂಧವನ್ನು ಇಟ್ಟುಕೊಂಡು ಸುತ್ತಮುತ್ತಲಿನ ಜನರ ಬಾಯಿಗೆ ತುತ್ತಾಗುತ್ತಾಳೆ. ಆದರೆ ಈಕೆ ಸ್ವತಂತ್ರವಾಗಿ ನನ್ನಿಷ್ಟದಂತೆ ನಾನು ಬಾಳುತ್ತೇನೆ ಎಂಬ ಆಶಯ ಹೊಂದಿರುತ್ತಾಳೆ.

"ತನ್ನ ಸಹವಾಸಕ್ಕೆ ಬರಲು ಯಾರಿಗೇನು ಅಧಿಕಾರ ಇದ್ದದ್ದು, ನಾನು ಸಾವುರ್ ಜನುತ್ತಾಕಾದ್ರು ವೋಯ್ತಿನಿ ಸಾವುರ್ ತರುಲಾಗದ್ರೂ ಇರ್ತೀನಿ, ನನ್ ಮಾನವ ಹಿಡ್ದು ಮಾತಾಡರು ತಂತಮ್ ಯೆಂಡ್ತಿದಿರ ಸರಿಯಾಗಿ ಕಟ್ಟಾಳ್ಲಿ"[೨೦] ಎಂದು ಸವಾಲು ಹಾಕತೊಡಗಿದಳು. ತನ್ನ ಬದುಕನ್ನು ತನ್ನಿಷ್ಟದಂತೆ ರೂಪಿಸಿಕೊಳ್ಳುವ ಹಕ್ಕುಬಾಧ್ಯತೆ ನನ್ನದು ಎನ್ನುವ ಮೂಲಕ ಮಹಿಳೆಯರಲ್ಲಿ ಸಹಜವಾದ ಧೈರ್ಯವನ್ನು ತುಂಬುವ ಮುಖಾಂತರ ಶೋಷಿತ ಮಹಿಳೆಗೆ ಧ್ವನಿಯಾಗಿ ನಿಲ್ಲುವ ನಿಟ್ಟಿನಲ್ಲಿ ಕಥೆಯು ಮುಕ್ತಾಯವಾಗುತ್ತದೆ. ಹೊಟ್ಟೆಯ ಹಸಿವು ಅಕ್ರಮ ಸಂಬಂಧಗಳಿಗೆ ನಾಂದಿಯಾಗುತ್ತದೆ ಎಂಬ ಧೋರಣೆಯನ್ನು ಕಥೆಯು ವ್ಯಕ್ತಪಡಿಸುತ್ತದೆ.

**'ಉರ್ದು ಶಾಲೆಯ ಸೆಳೆತ'** ಕಥೆಯಲ್ಲಿ ಲೇಖಕರು ನಮ್ಮೂರ ಕೆರೆ ಬಹಳ ಸುಂದರ ಸರೋವರದಂತಿತ್ತು. ವಿಶಾಲವಾದ ಆ ಕೆರೆಯ ತುಂಬ ನುರಾರು ಜಾತಿಯ ಪಕ್ಷಿಗಳು ಸದಾ ಕಲರವಗೊಳ್ಳುತ್ತಿದ್ದವು ಎಂದು ಪ್ರಾರಂಭಿಸಿ ಪ್ರಕೃತಿಯನ್ನು ವೈಭವಿಸುವ ಮುಖಾಂತರ ಮುಸ್ಲಿಂ ಅವರ ಸಂಸ್ಕೃತಿಗೂ ದಲಿತರ ಸಂಸ್ಕೃತಿಗೂ ಇರುವ ವಿಭಿನ್ನ ನೆಲೆಯನ್ನು ಕಥೆಯ ಮೂಲಕ ಹೇಳುತ್ತಾ, ಮುಸ್ಲಿಂ ಅವರು ಹೇಗೆ ಆಧುನಿಕತೆಗೆ ಹೊಂದಿಕೊಂಡು ತಮ್ಮ ಜಿವನ ಶೈಲಿಯನ್ನು ರೂಪಿಸಿಕೊಳ್ಳುತ್ತಾರೆ ಎಂಬುದನ್ನು ಹೇಳುತ್ತಾರೆ. ಕೆರೆಯ ಆಚೆ ದಡದಲ್ಲಿ ಇನ್ನೊಂದೂರಿತ್ತು. ಅದರ ಹೆಸರು ಹೊಂಗನೂರು. ಅಲ್ಲೆಲ್ಲ ಆ ಕಾಲಕ್ಕೇ ಅರೇಬಿಯಾದ ಅತ್ತರಿನ ಗಮಲು ಮುಸ್ಲಿಂ ಹುಡುಗಿಯರಿಂದ ಗಮಗಮಿಸುತ್ತಿತ್ತು. ನನ್ನ ಮಟ್ಟಿಗೆ ಈ ಸಾಧಾರಾಣವಾಗಿ

ಕಾಣುವ ಆ ಹೊಂಗನೂರು ಆ ಹೊತ್ತಿಗೆ ಒಂದು ಚೆಂದದ ಪೇಟೆಯಂತೆ ಕಂಗೊಳಿಸುತ್ತಿತ್ತು. ನಮ್ಮೂರಿಂದ ನಡೆದು ಬಂದು ಹೊಂಗನೂರು ತಲುಪಿ ಅಲ್ಲಿಂದ ಸಿಗುವ ಹೆಚ್ಚುವರಿ ಬಸ್ಸುಗಳಿಗಾಗಿ ಕಾಯುವಾಗಲೆಲ್ಲ ನನಗೆ ಈ ಮುಸ್ಲಿಂ ಹುಡುಗಿಯರೇ ಕಣ್ಣು ತುಂಬಿಕೊಳ್ಳುತ್ತಿದ್ದರು ಎಂದು ನಿವೇದಕರು ಅದೂ ಅಲ್ಲದೆ ಉರ್ದು ಶಾಲೆಯ ಎದುರೇ ನಾವು ಬಸ್ಸಿಗಾಗಿ ಕಾಯುತ್ತ ಕೂಬೇಕಾಗಿದ್ದರಿಂದ ಆ ಶಾಲೆಯ ಹೆಣ್ಣು ಮಕ್ಕಳೆಲ್ಲ ನನಗೆ ಯಾವುದೋ ಲೋಕದ ಮಾಯ ಸುಂದರಿಯರಂತೆ ಗೋಚರಿಸುತ್ತಿದ್ದರು ಎನ್ನುವ ನಿಟ್ಟಿನಲ್ಲಿ ನಿರೂಪಕರು ತಮ್ಮ ಊರಿನ ಕೆರೆಯ ಸೌಂದರ್ಯವನ್ನು ವರ್ಣನೆ ಮಾಡುತ್ತಾ ತಮ್ಮ ಬಾಲ್ಯದ ಸಿಹಿಗಳಿಗೆಯನ್ನು ಮೆಲುಕುತ್ತಾ ಪಕ್ಕದ ಹೊಂಗನೂರಿನ ಮುಸ್ಲಿಂ ಕೇರಿಯ ಬಗ್ಗೆ ಅಲ್ಲಿನ ಸಂಪ್ರದಾಯ, ಆಚಾರ–ವಿಚಾರ, ಅವರ ಉಡುಗೆ–ತೊಡುಗೆ, ಆಹಾರ ಪದ್ಧತಿ ಒಟ್ಟಾರೆಯಾಗಿ ಅವರ ಬದುಕನ್ನು ಕಥೆಯ ಮೂಲಕ ಕಟ್ಟಿಕೊಡುವುದರ ಜೊತೆಗೆ ದಲಿತ ಕೇರಿಯ ಬದುಕನ್ನು ಹೇಳುವ ಲೇಖಕರು ಹಲವು ನೆಲೆಗಳ ಜನಾಂಗದ ಪದ್ಧತಿಯನ್ನು ಸಮಾಜಕ್ಕೆ ಮುಖಾಮುಖಿ ಮಾಡುವುದನ್ನು ಕಥೆಯಲ್ಲಿ ಕಾಣುತ್ತೇವೆ.

ಕಥೆಯಲ್ಲಿ ಲೇಖಕರು ಮುಸ್ಲಿಂ ಹೆಣ್ಣುಮಕ್ಕಳ ಸೌಂದರ್ಯ, ಬಿನ್ನಾಣ, ಹಾಗೆ ವಿಶೇಷವಾಗಿ ಆ ಸುಂದರ ಹುಡುಗಿಯರು ಬಲಸುವ ಪ್ರಸಾದನ ಕಲೆಗಳನ್ನು ಒಂದು ಪಟ್ಟಿಯ ದೃಶ್ಯವನ್ನೇ ಕೊಡುತ್ತಾರೆ. ಅವರು ತೊಡುವಂತಹ ಉಡುಪನ್ನು ನಿವೇದಕರು ತೊಡುವ ಪ್ರಯತ್ನದಲ್ಲಿ ಆಗುವಂತಹ ಅವಾಂತರಗಳು ಹಾಸ್ಯವಾಗಿ ಕಾಣಿಸುತ್ತದೆ. ಇವರು ತೊಡುವ ಖಾಕಿ ಚಡ್ಡಿಯನ್ನು ತೊರೆದು ಮುಸ್ಲಿಂರು ತೊಡುವ ಆಕರ್ಷಕ ಬಟ್ಟೆಯನ್ನು ನಿರೂಪಕರು ತೊಡುವ ಆಸೆಯಲ್ಲಿ ಅವರು ಸಂಪ್ರದಾಯ ಕಡೆಗೆ ವಾಲುವಂತಹ ಸ್ಥಿತಿ ಕಂಡುಬರುತ್ತದೆ. ಅಲ್ಲದೆ ಮುಸ್ಲಿಂರಿಗೂ ದಲಿತ ಕೇರಿಯವರಿಗೂ ತುಂಬಾ ಹತ್ತಿರದ ಸಂಬಂಧವಿದ್ದು, ಮುಸ್ಲಿಂ ಮಹಿಳೆಯನ್ನೇ ಮದುವೆಯಾಗುವ ನಿರ್ಧಾರವನ್ನು ಮಾಡಿರುತ್ತಾರೆ. ನಿರೂಪಕರು ಬಾಲ್ಯದಲ್ಲಿಯೇ ನಾವು ಮುಸ್ಲಿಂ ಶಾಲೆಗೆ ಏಕೆ ಸೇರಬಾರದು ಎಂಬ ವೈಚಾರಿಕ ಪ್ರಶ್ನೆಯನ್ನು ಎತ್ತುತ್ತಾರೆ. ಇವರ ಶಾಲೆಯ ಬ್ರಾಹ್ಮಣ ಮಾಸ್ಟರು ಹತ್ತಿರ ಕರೆದುಕೊಳ್ಳುತ್ತಿದ್ದರೂ ಶೂದ್ರ ಜಾತಿಯ ಮಾಸ್ಟರು ದಲಿತ ಕೇರಿ ಹುಡುಗರನ್ನು ಕೀಳಾಗಿ ಕಾಣುತ್ತಿದ್ದರು. ಇಲ್ಲಿ ಒಂದು ಸಮಾಜದ ವ್ಯವಸ್ಥೆಯನ್ನು ಮತ್ತು ಒಂದು ಶಾಲೆಯ ವಾತಾವರಣವನ್ನು ಹೊರತೆರೆದಿಡುತ್ತಾರೆ.

ನಿವೇದಕರು ಉರ್ದು ಶಾಲೆಗೆ ಹೊಗುವಂತಹ ಒಂದು ಅವಕಾಶ ಬಂದು ಅಲ್ಲಿನ ಶಾಲೆಯ ಬೆಂಚು, ಚೇರು, ಟೇಬಲ್ ಮೇಲೆಲ್ಲಾ ಓಡಾಡಿ ಆನಂದಿಸುತ್ತಾರೆ. ಜಾನಪದ ಕಲೆಯಲ್ಲಿದಲಿತ ಕೇರಿಯದೆ ಮೊದಲ ಬಹುಮಾನ ಪಡೆದು ಎಲ್ಲರಿಂದ

ಮೆಚ್ಚಿಸಿಕೊಂಡಿರುತ್ತಾರೆ. ಆ ಸುಂದರ ಉರ್ದುಶಾಲೆಯನ್ನು ನೆನಪಿಸಿಕೊಳ್ಳುತ್ತಾ ಈಗ ಅವರು ಎಂತಹ ಸ್ಥಿತಿಯಲ್ಲಿದ್ದಾರೆಂದು ಕಲ್ಪಿಸಿಕೊಳ್ಳುತ್ತಾರೆ. ಇಲ್ಲಿ ನಾವು ಗಮನಿಸಬೇಕಾದುದು ಮೊಗಳ್ಳಿಯವರು ತಮ್ಮ ಅಂತರಾಳದ ಮನಸ್ಥಿತಿಯನ್ನು ಎರಡು ವಿಭಿನ್ನ ನೆಲೆಯಲ್ಲಿರುವ ಜನಾಂಗದ ಸಂಸ್ಕೃತಿಯನ್ನು ಹೊಂದಿಸುತ್ತಾ ಬದುಕಿನೊಂದಿಗೆ ಎಲ್ಲವನ್ನು ಕ್ರೂಢೀಕರಿಸುತ್ತಾ ಹೊಸ ಸಂಸ್ಕೃತಿಯನ್ನು ಸೃಷ್ಟಿಸುವಲ್ಲಿ ಸಾಮಾಜಿಕ ಬದಲಾವಣೆಯನ್ನು ಅಪೇಕ್ಷಿಸುತ್ತಾರೆ. ಇಲ್ಲಿ ಲೇಖಕರು ಮುಸ್ಲಿಂರ ಬದುಕನ್ನು ತಮ್ಮ ಬದುಕಿನೊಂದಿಗೆ ಸೇರಿಸುತ್ತಾ ಸಾಂಸ್ಕೃತಿಕವಾಗಿ ಬೆರೆಯುವ ಒಂದು ನಿಲುವನ್ನು ಹೊಂದಿರುವುದರ ಜೊತೆಗೆ ಇವತ್ತಿನ ಸಂದರ್ಭದಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಮುಂತಾದ ಧರ್ಮೀಯರು ಶಾಲಾ–ಕಾಲೇಜುಗಳಲ್ಲಿ ಒಟ್ಟಾಗಿ ಓದುವಂತಹ ವಾತಾವರಣ ನಿರ್ಮಾಣವಾಗಿದೆ. ಆದರೂ ಕೆಲವೊಂದು ಶಾಲೆಗಳಲ್ಲಿ ಶೋಷಣೆ, ಅಪಮಾನ ಮುಂತಾದವು ಕಂಡುಬರುತ್ತವೆ.

ನಮ್ಮ ಕೇರಿಯವರು ಮುಸ್ಲಿಂರನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರೂ. ಉಳಿದವರು ಅವರನ್ನು ಶತ್ರುಗಳಂತೆ ಭಾವಿಸುತ್ತಾರೆ. ಗೋಮಾಂಸವನ್ನು ಮಾರುವ ಅಲ್ಲಿಖಾನ್, ತೆಂಗಿನಕಾಯಿ ವ್ಯಾಪಾರಕ್ಕೆ ಬರುವ ಸಾದಿಕ್ ಮತ್ತು ಕಡ್ಲೆ ಪಪ್ಪು, ಮಿಠಾಯಿ, ಹಣ್ಣು ಮಾಲು ಬರುವ ಒಬ್ಬೊಬ್ಬರೂ ಒಂದಲ್ಲ ಒಂದು ರೀತಿಯಲ್ಲಿ ನಮ್ಮ ಕೇರಿಯವರ ಜೊತೆ ಸಂಬಂಧ ಇಟ್ಟುಕೊಂಡಿದ್ದರು. ದನದ ಮಾಂಸ ತಿನ್ನುವಲ್ಲಿ ಇಬ್ಬರೂ ಸಮಾನರೆಂಬ ಒಂದೇ ಕಾರಣದಿಂದ ಮುಸ್ಲಿಂಮರು ಕೂಡ ನಮ್ಮ ಜನವೇ ಎಂದು ನನಗೆ ಆಗಲೇ ಅನಿಸಿಬಿಟ್ಟಿತ್ತು. ಹೀಗಾಗಿ ಉರ್ದು ಶಾಲೆಯ ಆ ಹುಡುಗಿಯರು ದನದ ಮಾಂಸದ ಬಿರಿಯಾನಿಯನ್ನು ತಿಂದು ನಲಿವ ರಸ ನಿಮಿಷಗಳನ್ನು ನೆನೆದುಕೊಂಡು ಅವರೂ ನನ್ನಂತೆ ದನ ತಿನ್ನುತ್ತಾರೆಂದು ಎಂತದೋ ಸಮಾನತೆ, ನೆಮ್ಮದಿ, ಪ್ರೀತಿಯನ್ನು ಇಟ್ಟುಕೊಳ್ಳುತ್ತಿದ್ದೆ. ಇಲ್ಲಿ ಮಹಿಳೆಯರ ಪ್ರೀತಿಪಾತ್ರತೆ ನಿರೂಪಕರಿಗೆ ಬಹಳಷ್ಟು ರಸಭರಿತ ಸಿಹಿಸಮಯವಾಗಿರುವುದನ್ನು ಕಾಣುತ್ತೇವೆ.

ಮುಸ್ಲಿಮರಿಗೆ ಪ್ರಮುಖವಾದ ಹಬ್ಬವೆಂದರೆ ಅದು ರಂಜಾನ್ ಆಗಿರುತ್ತದೆ. ಆ ಸಂದರ್ಭದಲ್ಲಿ ನಿರೂಪಕರ ಮನೆಗೆ ಹಬ್ಬಕ್ಕೆ ಕರೆ ಬರುತ್ತಿರುತ್ತದೆ. ಇಲ್ಲಿ ಲೇಖಕರ ಕಥೆಯಲ್ಲಿ ಮಹಿಳೆ ಪಾತ್ರಗಳಲ್ಲಿ ಹಿಂದೂ, ಮುಸ್ಲಿಂ ಹೊಂದಾಣಿಕೆ ಅಲ್ಲಲ್ಲಿ ಕಂಡುಬರುತ್ತದೆ. ಅಂದರೆ ನಿರೂಪಕರ ತಾಯಿಗೂ, ಮುಸ್ಲಿಂ ಬೂಬಮ್ಮನಿಗೂ ಅವ್ವ ಮಗಳ ಸಂಬಂಧದ ಬಾಂಧವ್ಯವಿದ್ದು ಆಗಾಗ ಬೂಬಮ್ಮ ನಮ್ಮ ಮನೆಗೆ ಬರುತ್ತಿದ್ದಳು. ಆ ಬೂಬಮ್ಮ ಮಾಟ ಮಂತ್ರದ ಜೊತೆಗೆ ಜನಪದ ವೈದ್ಯವನ್ನು ಚೆನ್ನಾಗಿ ಬಲ್ಲವಳಾಗಿದ್ದು, ನಾನು ಮಗುವಾಗಿದ್ದಾಗ

ಅನೇಕ ರೀತಿಯ ಆರೈಕೆಯನ್ನು ಮಾಡಿ ಸಾಯುವ ಸ್ಥಿತಿಯಲ್ಲಿದ್ದ ನನ್ನನ್ನು ಕಾಪಾಡಿದ್ದಳಂತೆ. ಹಾಗಾಗಿಯೇ ಆ ಬೂಬಮ್ಮ ನನ್ನನ್ನು ಸ್ವಂತ ಮೊಮ್ಮಗನನ್ನು ಕರೆಯುವಂತೆ ನಡೆಸಿಕೊಳ್ಳುತ್ತಿದ್ದಳು ಎಂದು ಲೇಖಕರು ಅಪಾರ ಪ್ರೀತಿಯನ್ನು ತೋರಿಸುತ್ತಾರೆ. ನನ್ನ ತಾಯಂತು ಆ ಬೂಬಮ್ಮನನ್ನು 'ಅವ್ವಾ' ಎಂದೇ ಕರೆಯುತ್ತಿದ್ದಳು. ಹತ್ತಾರು ಕಾರಣಗಳಿಂದ ಮುಸ್ಲಿಂ ಕೇರಿಗಳು ನನ್ನ ಮನದೊಳಗೆ ಬೆರೆತು ಹೋಗಿದ್ದವು. ನನ್ನ ಬಾಲ್ಯದ ಅ ಉರ್ದುಶಾಲೆಯ ಆ ಹುಡುಗಿಯರ ಹತ್ತಿರದ ಗಮಲು ಈಗ ತಾನೇ ಮೂಗಿಗೆ ಬಂದು ಸುಳಿದು ಹೋದಂತೆ ಆ ಕೋಮಲ ಎಳೆದುಟಿಗಳು ಹರಳಿ, ನಗೆಯ ಮಲ್ಲಿಗೆ ಹೂಗಳ ಚೆಲ್ಲುತ್ತಿದೆ ಎಂದು ನಿರೂಪಕರು ಮೆಲಕು ಹಾಕುವುದನ್ನು ಕಾಣುತ್ತೇವೆ. ಇಲ್ಲಿ ಮಹಿಳಾ ಸಹಕಾರತ್ವ ಭಾವನತ್ವ, ಮೌಲ್ಯಯುಳ್ಳ ಚಿಂತನೆಗಳನ್ನು ನಾವು ಕಾಣಬಹುದಾಗಿದೆ. ಇಲ್ಲಿ ಮಹಿಳಾ ಪ್ರಜ್ಞೆಯಲ್ಲಿ ಪ್ರೀತಿ, ವಾತ್ಸಲ್ಯ, ಹುಮ್ಮಸ್ಸು, ಉತ್ಸಾಹ, ಧರ್ಮಾತೀತವಾಗಿ ವಾಲಿರುವುದನ್ನು ಸ್ಪಷ್ಟವಾಗಿ ಗಮನಿಸಬಹುದು.

**'ಕಾಳಗದ ಹುಂಜ'** ಕಥೆಯಲ್ಲಿ ರಾಜನ ಅವ್ವ ತನ್ನ ಗಂಡನಿಂದ ನಡೆಯುವಂತ ಯಾವುದೇ ರೀತಿಯ ಶೋಷಣೆಗೂ ಪ್ರತಿಭಟನೆಯನ್ನು ತೋರದೆ, ಸಹನಮೂರ್ತಿಯಂತೆ ಎಲ್ಲವನ್ನು ತನ್ನ ಒಡಲೊಳಗೆ ಗರ್ಭೀಕರಿಸಿಕೊಂಡು ಬದುಕುವ ಸ್ಥಿತಿ ಕಂಡುಬರುತ್ತದೆ. ರಾಜನ ಅಪ್ಪ ಕೊಂಡಣ್ಣ, ಸರ್ವರೀತಿಯಲ್ಲೂ ಸ್ವತಂತ್ರನಾಗಿರುತ್ತಾನೆ. ಇವನು ತನ್ನ ಹೆಂಡತಿಯನ್ನು ಅಡಿಗೆ ಮನೆಯಿಂದ ಹೊರಗೆ ಬರದಂತೆ ಬಂಧಿಸಿರುತ್ತಾನೆ. ಈ ಸ್ಥಿತಿಯನ್ನು ನೋಡಿದ ಕೊಂಡನ ಮಗನಾದ ರಾಜನು ತನ್ನ ತಾಯಿಯನ್ನು ಬಂಧನದಿಂದ ಬಿಡಿಸಲು ಪ್ರತಿಭಟನೆಯನ್ನು ಮಾಡುವುದು ಸಹಜವಾದುದಾಗಿದೆ. ಯಾವುದೇ ಮಹಿಳೆಯು ಮದುವೆಯಾದ ಮೇಲೆ ಗಂಡನಿಂದ ಒಲವನ್ನು ಬಯಸುವುದು ಸಹಜವಾದ ನಿಸರ್ಗ ನಿಯಮ. ಆದರೆ ಕಥೆಯಲ್ಲಿ ಕೊಂಡಣ್ಣನು, ತನ್ನ ಹುಂಜಕ್ಕೆ ತೋರಿಸುವಷ್ಟು ಪ್ರೀತಿಯನ್ನು ಆಕೆಗೆ ತೋರುವುದಿಲ್ಲ. ರಾಜನು ಮಾತ್ರ ತಾಯಿಯ ಬಗ್ಗೆ ಅಪಾರವಾದ ಪ್ರೀತಿ ಇಟ್ಟುಕೊಂಡಿದ್ದಾನೆ. ರಾಜನ ತಾಯಿಯು, ನೋವಿನ ಬೇಗೆಯಲ್ಲಿ ಬೆಂದು, ನೆಮ್ಮದಿ, ಪ್ರೀತಿಗಳು ಇಲ್ಲದೆ ನಲುಗಿಹೋಗುತ್ತಾಳೆ.

ಕಥೆಯಲ್ಲಿ ಕೊಂಡಣ್ಣನು ಪ್ರೀತಿಯ ಅಂತಃಕರಣವಿಲ್ಲದೆ ತನ್ನ ಮಡದಿಯನ್ನು ಕ್ರೂರ ಮನಸ್ಸಿನಿಂದ ನಡೆಸಿಕೊಳ್ಳುವ ರೀತಿ ತುಂಬಾ ದಯನೀಯವಾದದ್ದು. ರಾಜನ ತಾಯಿಯು ದೇವರ ಮುಂದೆ ಧ್ಯಾನದ ಸ್ಥಿತಿಯಲ್ಲಿ ಕುಳಿತು ತನ್ನ ಪ್ರಾಣವನ್ನು ಕಳೆದುಕೊಳ್ಳುವುದು ದುರಂತವಾಗುತ್ತದೆ.

ಮಗನಾದ ರಾಜನನ್ನು ತನ್ನ ತಾಯಿಯ ಸಾವನ್ನು ನೋಡಿ ಎಷ್ಟೊ ಸ್ತ್ರೀಯರ ಸ್ಥಿತಿಯು ಇದೆ ತಾನೇ ಎಂದು ಮರುಗುತ್ತಾನೆ. ಕಥೆಯಲ್ಲಿ ರಾಜನ ತಾಯಿಯು ಕೊಂಡಣ್ಣನ ಒಲವಿಂದ ವಂಚಿತಳಾಗಿ ಮುಗ್ದನಾದ ರಾಜನ ಬದುಕನ್ನು ಅತಂತ್ರ ಸ್ಥಿತಿಗೆ ಇಟ್ಟು ಸಾವಿನಲ್ಲಿ ಮರೆಯಾಗುವ ಹೆಣ್ಣಿನ ದಯನೀಯ ನೆಲೆಕಂಡುಬರುತ್ತದೆ. ಸ್ತ್ರೀವಾದಿ ನೆಲೆಯಲ್ಲಿ ಈ ಕಥೆ ಗಮನಾರ್ಹವಾಗಿದ್ದು, ದಲಿತ ಸ್ತ್ರೀವಾದದ ಪರಿಕಲ್ಪನೆಯ ಮುನ್ಸೂಚನೆಯನ್ನು ಕಥೆ ವ್ಯಕ್ತಪಡಿಸುತ್ತದೆ.

**'ಆ ಹೆಂಗಸು'** ಕಥೆ ವಿಧವೆಯಾದ ಹೆಣ್ಣು ಜೀವನವನ್ನು ಸಾಗಿಸುವಲ್ಲಿ ಏನೆಲ್ಲ ಸಂಕಷ್ಟಗಳನ್ನು ಅನುಭವಿಸಬೇಕು ಮತ್ತು ಎದುರಿಸಬೇಕು ಎನ್ನುವುದನ್ನು ಹಾಗೂ ಪೂಜಾರಿಯು ತನ್ನ ಕಾಮದ ಬಯಕೆಯ ಈಡೇರಿಕೆಗಾಗಿ ದೈವತ್ವದ ಕಲ್ಪನೆಯಲ್ಲಿ ಆಕೆಯನ್ನು ಕೊಡುವಾಗಿನ ಸಂದರ್ಭಗಳನ್ನು ಅಭಿವ್ಯಕ್ತಪಡಿಸುತ್ತದೆ. ಆಕೆಯಿಂದ ಉಂಟಾದ ಅವಾಂತರಗಳಿಗೆ ಪೂಜಾರಪ್ಪ ಮತ್ತು ಗೌಡರಿಬ್ಬರ ಸ್ಥಿತಿಯನ್ನು ವ್ಯಂಗ್ಯವಾಗಿ ಕಟ್ಟಿಕೊಡುವ ಮೂಲಕ ವಿಧವೆ ಹೆಂಗಸಿನ ಧೈರ್ಯ ಮತ್ತು ಕಲಿತಿರುವಂತ ವಿದ್ಯೆ ಇವೆಲ್ಲವನ್ನು ಕಥೆಗಾರರು ಚಿತ್ರಿಸಿದ್ದಾರೆ.

ಕೆಂಪಿ ಎಂಬ ಮಹಿಳೆಯು ಸೌಂದರ್ಯವನ್ನು ತುಂಬಿಕೊಂಡು ಕಾಮಿನಿಯಂತೆ ಕಾಣುತ್ತಿದ್ದಳು. ಇಂತಹ ಚಲುವೆಯಾಗಿದ್ದ ಕೆಂಪಿಯು ಗಂಡನನ್ನು ಕಳೆದುಕೊಂಡ ಮೇಲೆ ಗುಡ್ಡದ ಗವಿ ಮಠದಸಿದ್ದರ ಜೊತೆ ರುದ್ರಾಕ್ಷಿ ಮಾಲೆಯನ್ನು ಹಾಕಿಸಿಕೊಂಡು ಊರೂರು ಅಲೆದು ಜೀವನ ನಡೆಸುತ್ತಿದ್ದಳು. ಒಂದು ದಿನ ಆಕೆಯನ್ನು ಕೂಡಲು ಬಂದ 'ಸಿದ್ಧ'ನಿಗೆ ಚುರುಕುಸೊಪ್ಪನ್ನು ಮೈಮೇಲೆ ಬಳಸಿಕೊಂಡು ಇವಳ ಸಹವಾಸವೇ ಬೇಡವೆಂದು ಬಿಟ್ಟು ಓಡಿಸುವುದು ಆಕೆಯ ಪ್ರತಿಭಟನೆಯಾಗಿದೆ.

ಊರಿನ ಪೂಜಾರಿಯ ಕಣ್ಣು ಈಕೆಯ ಮೇಲೆ ಬಿದ್ದು ಆಕೆಯನ್ನು ಬಯಸುತ್ತಾನೆ. ಪುರುಷ ಪ್ರಧಾನ ಸಮಾಜದಲ್ಲಿ ಗಂಡನನ್ನು ಕಳೆದುಕೊಂಡ ಹೆಣ್ಣು ಯಾವ ರೀತಿ ತೊಡಕನ್ನು ಅನುಭವಿಸಬೇಕು ಎಂಬುವುದನ್ನು ಕತೆ ತಿಳಿಸುತ್ತದೆ. ಬ್ರಾಹ್ಮಣರು ಹಲವು ತಂತ್ರಗಳ ಮೂಲಕ ದಲಿತ ಮಹಿಳೆಯನ್ನು ತನ್ನ ಕಾಮದ ತೆಕ್ಕೆಗೆ ಬಿಳಿಸಿಕೊಂಡು ಬಲಿಪಶುವಾಗಿ ಮಾಡುವ ಕೃತ್ಯವನ್ನು ಎಸಗುತ್ತಾರೆ. ಈ ರೀತಿ ಹಿಂಸಿಸುವುದು ಅವರ ತತ್ವಕ್ಕೆ ಆಧ್ಯಾತ್ಮಕಕ್ಕೆ ಪೆಟ್ಟು ಬೀಳುವಂತದ್ದು, ಬ್ರಾಹ್ಮಣತ್ಮವು ಪಶುವಿನಂತೆ ಕಂಡರೂ, ಅದರ ವ್ಯಾಘ್ರಮುಖ ಹೊರ ಜಗತ್ತಿಗೆ ಗೊತ್ತಾಗುವುದಿಲ್ಲ.

ಈ ತಂತ್ರಗಾರಿಕೆಯು ವೇದಗಳಿಂದಲೂ ಬಂದಿರುವುದನ್ನು ಕಾಣುತ್ತೇವೆ. ವೈದಿಕ ವ್ಯವಸ್ಥೆ ತಲೆತಗ್ಗಿಸುವಂತಹ ಕ್ರೌರ್ಯವನ್ನು ಮೆರೆದು, ದಲಿತ ಸ್ತ್ರೀಯರನ್ನು ಬೆತ್ತಲೆಗೊಳಿಸಿದೆ. ಕಥೆಯಲ್ಲಿ ಬರುವ ಕೆಂಪಿ, ಪೂಜಾರಿಯ ಮಾತಿನಂತೆ ಗೌಡನನ್ನು ಕೂಡಲು ಹೋಗುವಾಗ ತನ್ನ ಜೊತೆಗೆ ಮೈಯೂರಿ ಲೇಹ್ಯವನ್ನು ತೆಗೆದುಕೊಂಡು ಹೋಗಿದ್ದಳು. ಗೌಡರು ಮೈಯನ್ನು ನೀವೂತ್ತಾ ಕೆಂಪಿ ತಂದಿದ್ದ ಲೇಹ್ಯವನ್ನು ಗೌಡನಿಗೆ ಗೊತ್ತಿಲ್ಲದಂತೆ ಹಚ್ಚಿದಳು. ತಕ್ಷಣವೇ ವಿಪರೀತ ಉರಿತ ಉಂಟಾಗುತ್ತದೆ. ಇದನ್ನು ಕಂಡು ಕೆಂಪಿಯು ಮೈಮೇಲೆ ದೇವಿಯು ಬರುವಂತೆ ನಟಿಸುತ್ತಾಳೆ.

ಗ್ರಾಮ್ಯದೈವಗಳ ನೆಲೆಯಲ್ಲಿ ಮಹಿಳಾ ಸಮಾಜವು ತನಗೆ ಬೇಕಾದ ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಿಕೊಂಡಿದೆ. ಈ ಮಹಿಳೆಯ ಪ್ರತಿಭಟನಾ ತಂತ್ರ ಅತ್ಯಂತ ವಿಶಿಷ್ಟವಾಗಿದೆ. ಪೂಜಾರಿಯು ಕೂಡ ತನ್ನ ಬಯಕೆಯನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಿದಾಗ ಇದೇ ಸ್ಥಿತಿಗೆ ಗುರಿಯಾಗುತ್ತಾನೆ. ಇಲ್ಲಿ ಮಹತ್ವವಾದ ವಿಚಾರವೆಂದರೆ ಕೆಂಪಿಯು ತನ್ನ ರಕ್ಷಣೆಗಾಗಿ ಯಾವ ಕಾನೂನಿನ ಮೊರೆಗೆ ಹೋಗದೆ ತಾನು ಕಲಿತಿರುವರು ಆತ್ಮ ರಕ್ಷಣೆಯ ವಿದ್ಯೆಯಿಂದ ಪಾರಾಗುತ್ತಾಳೆ.

ಕಥೆಯಲ್ಲಿ ಕೆಂಪಿಯು ತನ್ನ ಆತ್ಮರಕ್ಷಣೆಗಾಗಿ ಜಾನಪದ ವಿದ್ಯೆಯನ್ನು ಬಳಸಿಕೊಳ್ಳುತ್ತಾಳೆ. ಇಲ್ಲಿರುವ ಅಂಶವು ಮಹಿಳೆ ತನಗೆ ಆದ ಶೋಷಣೆಯನ್ನು ತಾನೇ ಧೈರ್ಯವಾಗಿ ಪ್ರತಿಭಟಿಸಲು ತಂತ್ರಗಾರಿಕೆಯನ್ನು ಹೇಗೆ ಬಲ್ಲವಳಾಗಿದ್ದಳು ಎಂಬುದನ್ನು ಸೂಚಿಸುತ್ತದೆ.

**'ಸೂರ್ಯವತಿ'** ಕಥೆಯ ಪ್ರಾರಂಭದಲ್ಲಿ ನಿರೂಪಕರು ನೆನಪಿಸಿಕೊಳ್ಳುವುದೆಂದರೆ ಕಳೆದ ರಾತ್ರಿಯಷ್ಟೇ ಅತ್ತೆ ಜಗಳವಾಡಿ ಮುನಿಸಿಕೊಂಡು ಹಿತ್ತಲು ಮನೆಯ ಗುಡಿಸಲು ಸೇರಿಕೊಂಡು ತನ್ನ ಪೂರ್ವಿಕರನ್ನೆಲ್ಲ ನೆನೆಯುತ್ತಾ ಹಿತ್ತಲ ಅಂಗಳದಲ್ಲಿ ಜಗಳದ ತೀರ್ಮಾನಕ್ಕೆ ಕರೆಯುವಂತೆ ದುಃಖಿಸುತ್ತಾ ಒಬ್ಬಳೇ ಮಾತನಾಡಿಕೊಳ್ಳುತ್ತಿದ್ದಳು. ಹಿತ್ತಲ ತುಂಬ ಬೆಳದಿಂಗಳು ಹರಿಯುತ್ತಿತ್ತು. ಬೇಲಿ ಮೇಲಿನ ಹೂಗಳ ಸಾಲಿನಲ್ಲಿ ಮಿಣುಕು ಹುಳುಗಳು ಯಾರ್ಯಾರನ್ನೋ ಹುಡುಕಾಡುತ್ತಿದ್ದವು. ಮನೆಯಲ್ಲಿ ನಡೆವ ಜಗಳಾಟದಲ್ಲಿ ಮತ್ತದೇ ಮುಗಿಯದ ರಾತ್ರಿಗಳಲ್ಲಿ ಎಂದಿನಂತೆ ಅತ್ತೆ ಏನಾದರೂ ಹೇಳುತ್ತಾಳೆಂದು ಕಾಯುತ್ತಾ ಚಾಪೆಯ ಮೇಲೆ ಮಲಗಿ ಆಕಾಶದ ವಿಸ್ತಾರವನ್ನು ಪುಟ್ಟ ಕಣ್ಣುಗಳಿಗೆ ತುಂಬಿಕೊಳ್ಳುತ್ತಿದ್ದೆವು. ಗಾಳಿಯ ತೆಳು ಅಲೆಗಳು ತೂಗುಯ್ಯಾಲೆಯಂತೆ ನಮ್ಮ ಮೇಲೆ ಹಾದುಹೊಗುತ್ತಿದ್ದವು ಎಂದು ಲೇಖಕರು ಬಾಲ್ಯದ ಘಟನೆಯನ್ನು ತಮ್ಮ ಬರೆಹದಲ್ಲಿ ಹೊರಹೊಮ್ಮಿಸುವುದು ಕಾಣುತ್ತೇವೆ.

ಕಥೆಯನ್ನು ಹೇಳುವ ನಿವೇದಕರು ಅತ್ತೆ ಕಥೆಯೊಳಗಿನ ಕಥಾ ನಿರೂಪಕಿಯಾಗುತ್ತಾಳೆ. ಅಲ್ಲಿ ಅತ್ತೆ ತಮ್ಮ ಶತಶತಮಾನಗಳ ಶೂನ್ಯತೆಯ ಬದುಕನ್ನು ಅರ್ಥಪೂರ್ಣವಾಗಿ ಗ್ರಹಿಸಿದ್ದಾಳೆ, ನಿಸರ್ಗದ ಚೆಲುವನ್ನು ಪಡೆದು ಹುಟ್ಟಿದ ಸೂರ್ಯವತಿಯನ್ನು ಕುಲದೇವತೆ ಎಂದು ಭಾವಿಸಿ ಅವಳಿಗೆ ಎಲ್ಲಾ ತರಹದ ಗೌರವಗಳನ್ನು ನಿವೇದಕರು ಅತ್ತೆಯ ಪೂರ್ವಿಕರು ಸಲ್ಲಿಸುತ್ತಿದ್ದರು. ಇಂತಹ ಚೆಲುವೆ ಪ್ರತಿಭಟನೆಯ ಶಕ್ತಿಯಾಗಿಯೂ ಕಂಡುಬರುತ್ತಾಳೆ. ಇಂತಹ ಪವಿತ್ರ ಕುಲದಲ್ಲಿ ಹುಟ್ಟಿದವರು ನಾವೆಂಬ ಹೆಮ್ಮೆ ಅತ್ತೆಗಿದೆ, ಈ ಸೂರ್ಯವತಿ ಇಲ್ಲಿಗೆ ಬರದಿದ್ದರು ಚಿಂತೆಯಿಲ್ಲ ನನ್ನಂತಹ ದಿಕ್ಕೆಟ್ಟವರನ್ನಾದರೂ ತನ್ನ ಬಳಿಗೆ ಕರೆದುಕೊಳ್ಳುವುದಿಲ್ಲ ಅವಳು. ಅವಳ ಹಾಗೆ ಬೆಂಕಿಯಾಗಿ ಉರಿದು ಬೆಳಕಾಗುವ ಪುಣ್ಯ ನಮ್ಮಂಥವರಿಗೆ ಎಲ್ಲಿಂದ ಬರಬೇಕು, ಇಲ್ಲೇ ಈ ನರಕದ ತೊಟ್ಟಿಲಲ್ಲೇ ಬೆಳೆದು ಅದೇ ತೊಟ್ಟಿಲನ್ನು ತೂಗಿ ಕಟ್ಟಿ ಬಾಳುವೆ ಮಾಡಿ ನಾವು ನಮ್ಮ ಲೆಕ್ಕಚುಕ್ತಾ ಮಾಡಿಕೊಳ್ಳಬೇಕು ಎಂದು ಹೇಳುವ ಅತ್ತೆ ತಮ್ಮ ಜೀವನದ ಆಳವಾದ ಸಂಕಟವನ್ನು ವಾಸ್ತವ ಜೀವನದಲ್ಲಿ ಸಿಗದಿರುವ ನೆಮ್ಮದಿ ಈ ರೂಪದಲ್ಲಾದರೂ ಸಿಗಲಿ ಎಂದು ಹಂಬಲಿಸುತ್ತಾಳೆ. ಆಕಾಶ ಕಾಯಗಳೆಲ್ಲ ಇವಳನ್ನೇ ಬೆರಗಾಗಿ ನೊಡುತ್ತಿದ್ದವು. ಹೆಮ್ಮಾರಿ ಬೆಳಕಾಗಿ ಕೆನ್ನಾಲಿಗೆಯ ಹೊರಸೂಸಿ ಆ ಮಾಯಾ ಪುರುಷನ ಕಡೆ ನೋಡುತ್ತಾ 'ಬಾರೋ ಹಿಂಬಾಲಿಸುವ ಗಂಡಸೇ ಶುರನೇ, ವೀರನೇ, ಪುರುಷ ಸಿಂಹವೇ ಬಾರೋ ನನ್ನೊಳಕ್ಕೆ ಬರುವೆಯೆನೋ, ಬಾರೋ ನನ್ನ ಗರ್ಭ ಸೇರಬಾರೋ ಎಂದು ಆಕಾಶ ಬಿರಿಯುವಂತೆ ಕೂಗಿಕೊಂಡು ಉರಿಯುತ್ತ ಉರಿಯುತ್ತ ದುಂಡು ದುಂಡಗೆ ಸುತ್ತುತ್ತಾ ಚೆಲುವಾದ ತನ್ನ ದೇಹವನ್ನು ಅಳಿದು ಸೂರ್ಯವತಿಯಾಗಿ ಬಿಟ್ಟಳು. ಉತ್ತುಂಗದಲ್ಲಿ ನಿಂತು ಭೂಮಿಯ ಕಡೆಗೆ ನೋಡಿದಳು. ಆಕೆಯ ಸಂವೇದನೆಯ ಬಹಳ ತೀವ್ರತೆಯಿಂದ ಕಾಣುತ್ತದೆ.

ದಲಿತ ಸಂಸ್ಕೃತಿಯು ತನ್ನೆಲ್ಲಾ ಆಚರಣೆಗಳಲ್ಲಿಯೂ ಗಾಢವಾದ ನಂಬಿಕೆಯೊಂದಿಗೆ ಬದುಕನ್ನು ನಡೆಸುತ್ತದೆ. ಪ್ರಕೃತಿಯೊಂದಿಗೆ ತನ್ನ ಭಾವನಾತ್ಮಕ ಸಂಬಂಧದೊಂದಿಗೆ ಬದುಕಿನ ಅನನ್ಯತೆಯನ್ನು ಮೌಖಿಕ ಕಥನಗಳ ಮೂಲಕ ನಿರೂಪಿಸಿಕೊಂಡು ಬರುತ್ತಿದೆ. ಭಾರತೀಯ ಪುರಾಣಗಳು ಹೆಚ್ಚಾಗಿ ವೈದಿಕ ವರ್ಗವು ತನ್ನ ಅನುಕೂಲಕ್ಕಾಗಿ ಸೃಷ್ಟಿಸಿಕೊಂಡು ಅದು ನೆಲೆಮೂಲ ಸಂಸ್ಕೃತಿಯ ನಂಬಿಕೆಗಳ ಅದರ ಆಚಾರ, ವಿಚಾರಗಳ ಮೇಲೆ ಬಲವಂತವಾಗಿ ತನ್ನ ಪ್ರಾಬಲ್ಯವನ್ನು ಹೇರುತ್ತದೆ. ನೆಲಮೂಲ ಸಂಸ್ಕೃತಿಯ ತನ್ನ ಶ್ರಮವನ್ನೇ ನಂಬಿಕೊಂಡು ಜೀವನ ನಡೆಸಿದರೆ ವೈದಿಕ ಸಂಸ್ಕೃತಿಯು ಶ್ರಮಜೀವಿಗಳ ಶ್ರಮವನ್ನು ಅಪಹರಣ ಮಾಡುತ್ತಾ ತನ್ನೆಲ್ಲಾ ಅನುಕೂಲಗಳನ್ನು ಸಾಧಿಸಿಕೊಳ್ಳುತ್ತದೆ. ಸಂಸ್ಕೃತಿ ಎನ್ನುವುದು ಸಮಾಜದ

ಭಾಗವೆಂಬಂತೆ ಕಂಡುಬರುತ್ತದೆ. ವೈದಿಕರು ಸಂಸ್ಕೃತಿಯ ಹೆಸರಿನಲ್ಲಿ ಸಮಾಜವನ್ನು ಅಸ್ತವ್ಯಸ್ತ ಮಾಡುತ್ತವೆ. ಮೊಗಳ್ಳಿಯವರ ಕಥೆಗಳಲ್ಲಿ ಜೀವನ ಮತ್ತು ಮಾನವೀಯ ಮೌಲ್ಯಗಳ ಹುಡುಕಾಟ ಕಂಡುಬರುತ್ತದೆ.

ಕಥೆಯಲ್ಲಿ ಮಹಿಳಾ ಪ್ರಜ್ಞೆ ಹೆಚ್ಚಾಗಿ ಕಂಡುಬರುವ ನಿಟ್ಟಿನಲ್ಲಿ ಲೇಖಕರ ಭಾವನೆ ಮತ್ತು ಮನಸ್ಥಿತಿ ಎಷ್ಟರಮಟ್ಟಿಗೆ ಅವರ ಬಾಲ್ಯದ ಜೀವನದಲ್ಲಿ ಪರಿಣಾಮಗಳು ಬಿರಿವೆ ಎನ್ನುವುದನ್ನು ಸೂರ್ಯವತಿ ಎಂಬ ಕಥೆಯಲ್ಲಿ ಚಿಂತಿಸಬಹುದು. ಕಥೆಯ ಹಂದರದಲ್ಲಿ ಅತ್ತೆ ಪಾತ್ರವೇ ಕೇಂದ್ರಬಿಂದುವಾಗಿ ತೆಗೆದುಕೊಂಡಿರುವುದು ಅವರ ತಂತ್ರಗಾರಿಕೆ ಎನ್ನುವ ಬದಲು ಅವರ ಪ್ರತಿಭೆ ಸೌಜನ್ಯತೆಯನ್ನು ಕಾಣುತ್ತೇವೆ. ಈ ಕಥೆಯಲ್ಲಿ ಸಾಮಾನ್ಯ ಸ್ತ್ರೀ ಬದುಕುವ ಸ್ಥಿತಿಗತಿಯನ್ನು ವಿಭಿನ್ನ ನೆಲೆಗಳಲ್ಲಿ ಚಿತ್ರಿಸಿರುವುದನ್ನು ನಾವು ಕಾಣುತ್ತೇವೆ.

**'ಕೋಮಲ ಕಾಯ'** ಕಥೆಯಲ್ಲಿ ಅಪಮಾನಕ್ಕೆ ಒಳಗಾದ ಸಾವಿತ್ರಿ ಮತ್ತು ಅದರ ವಿರುದ್ಧ ನಿಂತು ಸಮಾಜವನ್ನು ಪ್ರತಿಭಟಿಸುವ ಶಕ್ತಿಯಾಗಿ ಇಂದಿರಾ ಕಂಡುಬರುತ್ತಾಳೆ. ಇಂದಿರಾ ಶಿಕ್ಷಣವನ್ನು ಪಡೆದು ಭಾರತೀಯ ಸಂಪ್ರದಾಯವನ್ನು ತೊರೆದು ಆಧುನಿಕ ಉಡುಪುಗಳನ್ನು ಧರಿಸುವುದರ ಮೂಲಕ ಹಿಂದಿನ ದಿನಗಳಲ್ಲಿ ಸ್ನೇಹಿತಳಾದ ಸಾವಿತ್ರಿಗೆ ಆದ ಅತ್ಯಾಚಾರದಂತಹ ಕರಾಳ ದಿನಗಳನ್ನು, ವ್ಯವಸ್ಥೆಯ ವಿರುದ್ಧ ನಿಂತು ಪ್ರತಿಭಟಿಸುತ್ತಾಳೆ. ನಮ್ಮ ಸ್ತ್ರೀಯರು ಕುರುಡು ಆಚರಣೆಯ ಅಂಧಕಾರದಲ್ಲಿ ಸಿಲುಕಿ ತಮ್ಮ ಲೈಂಗಿಕ ಆಸೆಯನ್ನು ಈಡೇರಿಸಿಕೊಳ್ಳುವುದು ಮದುವೆಯ ಮೂಲಕವೇ ಎಂಬ ನಿಲುವನ್ನು ಪ್ರತಿಭಟಿಸುತ್ತಾಳೆ.

ಇಲ್ಲಿ ಇಂದಿರೆ ತನ್ನ ಸ್ತನಗಳನ್ನು ತಾನೆ ಒತ್ತಿಕೊಳ್ಳುವುದರ ಮೂಲಕ ವ್ಯವಸ್ಥೆಯ ವಿರುದ್ಧ ತಿರುಗಿ ನಿಂತಿರುವುದರ ಹಿಂದೆ ಗಂಡಸಿನ ತಿರಸ್ಕಾರವು ಇದೆ. ಸಮಾಜದಲ್ಲಿ ನಮಗ ಇರುವಂತಹ ನಿಲುವು ವ್ಯವಸ್ಥೆಯ ವಿರುದ್ಧ ಮಾತನಾಡುವುದನ್ನು ಇಂದಿರೆಯ ಮೂಲಕ ಕಾಣುತ್ತೇವೆ. ಸ್ತ್ರೀಯು ಕೇವಲ ಮಕ್ಕಳನ್ನು ಹಡೆಯುವ ಭೋಗವಸ್ತುವಾಗಿರದೆ, ಪ್ರಕೃತಿ ಸಹಜ ವಿಚಾರಧಾರೆಗಳನ್ನು, ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು ಎಂಬ ತತ್ವ ಹಿನ್ನೆಲೆಯು ಇಂದಿರೆಯ ಮುಖಾಂತರ ಕಥೆಯಲ್ಲಿ ಪ್ರಕಟಗೊಂಡಿದೆ. ಮನು ಹೇಳಿದಂತೆ ಸ್ತ್ರೀ ಸಮಾನತೆಗೆ ಅರ್ಹಳಲ್ಲ ಎಂಬ ಮಾತನ್ನು ವಿರೋಧಿಸುವುದು ಎದ್ದುಕಾಣುತ್ತದೆ.

ಸಾವಿತ್ರಿಯನ್ನು ಶಾಲೆಯ ಹೆಡ್‌ಮಾಸ್ಟರ್ ಎರಡುಬಾರೀ ಅನುತ್ತೀರ್ಣಗೊಳಿಸಿ, ಅವನ ಕಾಮದಾಹ ತೀರಿಸಿಕೊಳ್ಳುತ್ತಾನೆ. ಇದರಿಂದ ಆಕೆ ಸಾವನ್ನಪ್ಪುತ್ತಾಳೆ. ಸಾವಿತ್ರಿ ಕೊಲೆಯಾದುದನ್ನು ತಿಳಿದ ಆಕೆಯ ತಾಯಿಯ ಆಕ್ರಂದನ ಮುಗಿಲುಮುಟ್ಟುತ್ತದೆ. ಇದಕ್ಕೆ ಪ್ರತಿರೂಪವಾಗಿ ಸಾವಿತ್ರಿ ತಾಯಿಯ ಶಾಪಕ್ಕೆ ಹೆಡ್‌ಮಾಸ್ಟರ್ ಕೊಲೆಯಾಗುತ್ತಾನೆ. ಈ

ಸಂಗತಿಯನ್ನು ಇಂದಿರೆ ಮೆಲುಕು ಹಾಕುತ್ತಾ ಮಹಿಳಾ ಪರವಾದ ಕಾನೂನು ಕ್ರಮಗಳನ್ನು ತಪ್ಪಿತಸ್ಥರ ವಿರುದ್ಧ ಜರುಗಿಸುವ ತೀರ್ಮಾನ ಕೈಗೊಳ್ಳುತ್ತಾಳೆ.

ಸ್ತ್ರೀಯರಿಗೆ ಕಾನೂನಿನ ಅರಿವನ್ನು ಮೂಡಿಸುತ್ತಾ ಸುಶಿಕ್ಷಿತವಾಗಿ ಬದುಕಲು ವಿದ್ಯೆವಂತಳಾದ ಇಂದಿರೆಯು ಇವರಿಗೆ ಮನವರಿಕೆ ಮಾಡಿಕೊಳ್ಳುತ್ತಾಳೆ. ಸಂಪ್ರದಾಯದ ಚೌಕಟ್ಟಿಗೆ ಒಳಗಾಗಿ ತಮ್ಮ ಸ್ವತಂತ್ರಕ್ಕೆ ವಿರೋಧವಾಗಿ, ಪುರುಷರ ಕಾಮತೃಷೆಗೆ ಬಲಿಯಾಗಿರುವುದನ್ನು ಈ ಕಥೆ ಸ್ಪಷ್ಟಪಡಿಸುತ್ತದೆ.

ಮೊಗಳ್ಳಿ ಗಣೇಶ ಅವರ ಕತೆಗಳ ಸ್ತ್ರೀಪಾತ್ರಗಳನ್ನು ಗಮನಿಸಿದಾಗ ಹಲವು ಅಂಶಗಳು ಎದ್ದು ಕಾಣುತ್ತವೆ. ದಲಿತರೇ ದಲಿತ ಮಹಿಳೆಯರನ್ನು ಶೋಷಿಸುವುದು ಒಂದು ನೆಲೆಯಾದರೆ ಮೇಲ್ವರ್ಗದವರು ಸ್ತ್ರೀಯರನ್ನು ದುರ್ಬಳಕೆ ಮಾಡಿಕೊಳ್ಳುವುದು ಮತ್ತೊಂದು ನೆಲೆಯಾಗಿ ಗೋಚರಿಸುತ್ತದೆ. ಮೊದಲ ತಲೆಮಾರಿನ ವಿದ್ಯಾವಂತ ಮಹಿಳೆಯರು ವ್ಯವಸ್ಥೆಯನ್ನು ನೇರವಾಗಿ ಪ್ರತಿಭಟಿಸಿದರೆ, ಅವಿದ್ಯಾವಂತ ಮಹಿಳೆಯರು ತಮ್ಮ ವಿಶಿಷ್ಟ ತಂತ್ರಗಾರಿಕೆಯಿಂದ ತಮ್ಮನ್ನು ರಕ್ಷಿಸಿಕೊಳ್ಳುವುದು ಕಂಡುಬರುತ್ತದೆ.

**ಮೌಢ್ಯತೆಗಳ ಪ್ರತಿಬಿಂಬ**

ಗ್ರಾಮೀಣ ಪ್ರದೇಶದಲ್ಲಿ ಮೌಢ್ಯತೆಗಳು ಸ್ಥಿರಸ್ಥಾಯಿಯಾಗಿ ಉಳಿದುಕೊಂಡು ಬಂದಿವೆ. ಜನರಲ್ಲಿ ಕಂಡುಬರುವಂತ ಮೂಢನಂಬಿಕೆಯಿಂದ ಉಂಟಾಗಬಹುದಾದಂತಹ ಅವಾಂತರಗಳು ಬದುಕನ್ನು ಅತಂತ್ರಗೊಳಿಸುತ್ತವೆ.

ಮೌಢ್ಯತೆಯ ದಲಿತರ ಬದುಕನ್ನು ಹೇಗೆ ಹಿಂಸಿಸುತ್ತವೆ ಎಂಬುದನ್ನು ಕಥೆಗಾರರು ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ದೇವರು, ಧರ್ಮದ ಹೆಸರಿನಲ್ಲಿ ಇಂದು ನಡೆಯುತ್ತಿರುವ ಅಪಾರವಾದ ಸಲಿಗೆಗಳ ಮೊಗಳ್ಳಿ ಅವರ ಕಥೆಗಳಲ್ಲಿ ವಿಶಿಷ್ಟವಾಗಿ ಒಡಮೂಡಿವೆ.

**'ಅಲ್ಲಿ ಆ ಅಳು ಈಗಲೂ'** ಕಥೆಯು ಮೂಢ ನಂಬಿಕೆಯಿಂದ ಆಗುವ ಗಂಡಾಂತರಗಳನ್ನು 'ಹೂವ'ನ ಪಾತ್ರದ ಮೂಲಕ ತೆರೆದಿಡುತ್ತದೆ. 'ಹೂವ'ನು ನಿಧಾನಗತಿಯಲ್ಲಿ ಅಳುವಿನ ಸಾವಿರ ರೂಪವನ್ನು ಬಿಚ್ಚುತ್ತೇನೆ ಎನ್ನುವ ಹಾಗೆ ಒಮ್ಮೆ ಜೋರಾಗಿ ಮತ್ತೊಮ್ಮೆ ದುಕ್ಕಳಿಸುತ್ತಾ ಅಳತೊಡಗಿದ. ಬೆಳಿಗ್ಗೆಯಿಂದ ಒಂದೇ ಸಮನೆ ರೋಧಿಸಿರುವುದನ್ನು ಕಂಡು 'ಸಿದ್ದಿ'ಯು ಸಾಕು "ನಿಲ್ಸು ನೀನ್ ಅಳು ಸದ್ದನ್ನು ಎಂದು ಸಿಟ್ಟನ್ನು ವ್ಯಕ್ತಪಡಿಸುತ್ತಾಳೆ"[೨೧] ಇವನು ರಾಕ್ಷಸನಂತೆ ದೊಡ್ಡ ಗಂಟಲನ್ನು ತೆಗೆಯುತ್ತಾ ಅಳತೊಡಗುತ್ತಾನೆ. ಎಲ್ಲಿಂದಲೋ ಓಡಿ ಬಂದ 'ಹೂವ'ನ ತಾತಾನು "ರಾಮ ರಾಮ

ಸಾಯ್ಸು ಬುಡಮ್ಮಿ, ಮೇಯ್ ಯಾಕ್ ಬಿಟ್ಟ ಬುಟ್ಟಮ್ಮೀ, ಸಾಯ್ಸಮ್ಮಿ ಒಬ್ಬೊಬ್ರೂ ಯಣಾ ಬೀಳಿಸ್ಮಾ ಅಂತ ಬಂದಿದ್ದಿರಾ? ದೇವ್ರೇ ಈಕರ್ಮವ ಯಾವತ್‌ಗೆ ತಪ್ಸಿಯಪ್ಪಾ ಅರಿದ್ಯೆದುನ್ಗೆ ಇಂಗೆ ಇಂಸೆ ಕೊಟ್ಟರೆ ಲೋಕ್ದಲ್ಯಾರಾರು"[೨೨] ಎಂದು ಗದ್ಗದಿತ ಸ್ವರದಲ್ಲಿ ಮಾತನಾಡುತ್ತಾ, ಆತನ ಮೈಸವರಿ ಸಮಾಧಾನ ಪಡಿಸಲು ಪ್ರಯತ್ನಿಸುತ್ತಾನೆ.

ಈತನು ಯಾವುದೋ ಕಾರಣದಿಂದ ಅಳುತ್ತಿರುವುದನ್ನು ಸೂಕ್ಷ್ಮವಾಗಿ ಅರಿಯದೆ ದೆವ್ವ ಹಿಡಿದಿದೆ ಎಂಬ ಅಜ್ಞಾನದಿಂದ ಮಗುವನ್ನು ಪರೀಕ್ಷಿಸುವುದನ್ನು ಕಂಡರೆ ಇವರಲ್ಲಿನ ಅಂಧಕಾರದ ನಂಬಿಕೆ ಗಟ್ಟಿಯಾಗಿ ಬೇರೂರಿರುವುದು ಸ್ಪಷ್ಟವಾಗುತ್ತದೆ. ಈತನ ಅಜ್ಜಿಯು ಇವನ ಅಳುವನ್ನು ಕಂಡು ಸದ್ದು ನಿಲ್ಲಿಸಲಿ ಎಂದು ಬೋಂಡ ಟೀ ಮುಂದಿಟ್ಟಳು, ಇದ್ಯಾವುದನ್ನು ಪರಿಗಣಿಸದ 'ಹೂವ'ನು ಅಳುತ್ತಲೇ ಇದ್ದ. ಅಜ್ಜಿಯು ಮತ್ತೆ ಸಮಾಧಾನಪಡಿಸುತ್ತ "ಮೊಗಾ ಯರೊಡುದ್ರಪ್ಪಾ, ಮಾತಾಡಪ್ಪಾ ನೋಡ್ದಾ ನೋಡ್ದಾ ನಿನ್ ಬೆಲ್ಲವ ಚೀಪ್‌ತಿನಿ ಸುಮ್ನಿರಪ್ಪಾ"[೨೩] ಎಂದು ಹೇಳುವ ನುಡಿ ರೋಚಕವೆನಿಸುತ್ತದೆ. 'ಹೂವ'ನ ವಿಕಾರ ಕಂಡವರು "ಇಂಗೆ ವತಾರಿಂದ್ಲು ಚಂಡಿ ಇಡ್ಕಂಡು ಏಟ್ಲು ಪಾಟ್ಲೂ ಯಾರ್ಲೂ ಜಗ್‌ದಂಗೆ ಇರ್ಬೇಕೆಂದ್ರೆ, ಇದು ದೇವ್ರೇ ಆಗಿರ್‌ಬೋದು"[೨೪] ಹೆದರಿ ಎಲ್ಲರು ಅವನ ಎದುರು ಮೂಕಸ್ಮಿತರಾದರು.

"ಅವನ ಅಜ್ಜಿಯು ದೀರ್ಘದಂಡ ನಮಸ್ಕಾರ ಹಾಕಿ ಗಂಧದ ಕಡ್ಡಿ ಹಚ್ಚಿ ಹಣೆಗೆ ಕುಂಕುಮ ಹಚ್ಚಿ ಭಯಭಕ್ತಿಯಿಂದ 'ಸ್ವಾಮಿ ನನ್ನಪ್ನೆ ಎಲ್ಲಾ ತಪ್ನೂ ವಟ್ಟಾಕಂಡು ಈ ಪಾಪಿಗಳ ನೋಡ್ಕೊ ಕೊನೆಗೂ ಬಂದಲ್ಲಾ"[೨೫] ಎಂದು ಆರಂಭಿಸಿ ಈ ದೇವರು ತಮಗಾಗಿ ಏನಾದರೂ ದಾರಿ ತೋರುತ್ತದೆ ಎಂಬ ಧೈರ್ಯದಿಂದ ನಿಂತಳು. ಎಲ್ಲ ಜನ ವಿಚಿತ್ರ ಮುಖಮುಖಿಯಲ್ಲಿ ದೇವರ ಕೈಯಲ್ಲಿ ಸೆರೆಸಿಕ್ಕಂತೆ ತತ್ತರಿಸಿ, ಅದು ಏನಾದರೂ ಮಾತನಾಡಲಿ ಎಂದು ಕಾದರು. ಇದನ್ನು ಗಮನಿಸಿದರೆ ಗ್ರಾಮೀಣ ಜನರ ಯೋಚನಾ ಲಹರಿಯ ಮೂಢನಂಬಿಕೆಯ ಕೂಪಕ್ಕೆ ಬಲಿಯಾಗಿದೆ ದೇವರು ಎಂದು ಹೇಳಿಕೊಳ್ಳುವ ಅವೈಜ್ಞಾನಿಕ ನೆಲೆಯನ್ನು ಕಥೆಬಿಚ್ಚಿಡುತ್ತದೆ.

"ಮುಂದೆ ಅವನ ತಾತಾ ನಡುಗುವ ಸ್ವರದಲ್ಲಿ ದೇವ್ರೇ ಅಳುವಂತಾ ತಪ್ಪು ನಾವೇನ್ ಮಾಡಿದ್ದೆವೋ ಕಾಣ್‌ನಲ್ಲಪ್ಪಾ"[೨೬] ಎಂದು ದೇವರು ಮಾತನಾಡುತ್ತಿದೆ ಎನ್ನುತ್ತಾ ಕಾಯುವುದು, ಅವರ ಅಜ್ಞಾನವನ್ನು ಸೂಚಿಸುತ್ತದೆ.

'ಹೂವ'ನ ಅವ್ವ ತನ್ನ ಮಗನ ಮೇಲೆ ದೇವರೆ ಬಂದಿದೆ ಎಂದು ತಿಳಿದು ಬೆಳಿಗ್ಗೆ ಕಾಣದೆ ಕತ್ತು ಹಿಸಕಲು ಹೋಗಿದ್ದೆನಲ್ಲ ಎಂದು ಬೆವರುತ್ತಿದ್ದಳು. "ನನ್ನಪ್ನೆ ಈವುಳಗೊಳ ಸಕನೆ ಪರೀಕ್ಷೆ ಮಾಡ್ಬೇಡ ನೀವೆ ಇಂಗತ್ರೆ ಇನ್ನು ನಮ್ಮಂತಾ ನರ ಪ್ರಾಣಿಗೊಳ ಪಾಡೇನು, ಹಾಳಾದ್ ಕಣ್ಣಲಿ ನೋಡಿ ನೋಡಿ ಇದೆಲ್ಲ ಸಾಕಾಗೋಗದೆ ಏನಾರ ಒಂದ್ ವಚನ ಕೊಡಿ ನಮ್ ತಪ್ಪು ತಿದ್ದಿ ಒಂದು ಸಮಾಚಾರ ಏಳಿ"[೨೭] ಎಂದು ಕೋರಿಕೊಂಡ 'ಹೂವ'ನು ತಾತನ ಮುಖವನ್ನು ದಿಟ್ಟಿಸಿ ನೋಡಿದ.

ಯಾರಿಗೂ ಯಾವ ಉತ್ತರವು ಬರಲಿಲ್ಲ. ದೇವರು ಮುನಿದಿದ್ದಾನೆ ಎನ್ನುವಂತೆಯೇ 'ಹೂವ'ನ ಚಿಕ್ಕಪ್ಪನು ಒಂದು "ನೀವು ಮಾತಾಡ್ದೆ ಇದ್ರೆ ನಾವು ಮೆಣಸುನ್ ಕಾಯ್‌ವಗೆ ಕೊಡ್ತಿವಷ್ಟೆ"[೨೮] ಎಂದು ದೇವರನ್ನೇ ಎದುರಿಸುವುದು ಕಥೆಯ ಬೆಳವಣಿಗೆಗೆ ನಾಂದಿಯಾಗುತ್ತದೆ. ಒಬ್ಬೊಬ್ಬರು ಒಂದೊಂದು ತರತರದಲ್ಲಿ ಕಲ್ಪಿಸಿಕೊಳ್ಳುತ್ತ ಇದು ಹೆಣ್ಣು ದೇವರು ಇರಬೇಕೆಂದು ಯೋಚಿಸುತ್ತಾ ಮಾತನಾಡಿಕೊಳ್ಳುತ್ತಾರೆ.

ಈ ಮೇಲಿನ ನುಡಿಗಳು ದಲಿತ ಸಮಾಜವನ್ನು ಒಂದು ಸಣ್ಣ ಘಟನೆ ಅವರ ಮನಸ್ಸಿನಲ್ಲಿ ಹೇಗೆಲ್ಲ ವಿಸ್ತಾರವಾಗಿ ಅಜ್ಞಾನದಿಂದ ದೈವ ಮತ್ತು ದೆವ್ವ 'ಹೂವ'ನ ಮೇಲೆ ಬಂದಿದೆ ಎನ್ನುವುದು ಅವರ ಮೂಢನಂಬಿಕೆಗೆ ಹಿಡಿದ ಕನ್ನಡಿಯಾಗಿದೆ.

'ಹೂವ'ನ ಅಪ್ಪನು ದೊಡ್ಡದ್ದಾಗಿ ತೇಗಿ "ಬಿಡ್ರಮ್ಮಿ ಇಲ್ಲಿ ಜಾಗವ್ವಾ, ನಾಮ್ಗೂ ಒಂದ್ ಮಾತು ಕೇಳ್ಮ, ದೇವ್ರೇ ನೇಳದು ಅನ್ನಾದ ಎನ್ನುತ್ತಾ ನುಗ್ಗಿದ, ಯಾರೋ ತಡೆದರು, ಕುಡಿದಿದ್ದಿಯೇ ಬ್ಯಾಡಾ, ದೇವ್ರು ಅನ್ನೋ ಬಯಾ ಇಲ್ಲುವೆ"[೨೯] ಎಂದರು. ಲೆಕ್ಕಿಸದೆ ಮುಂದೆ ಹೋಗಿ ನಮಸ್ಕರಿಸಿ "ಎಲ್ಲಿಯವಳವ್ವಾ ನೀನು ವತಾರಿಂದ್ಲೂ ನನ್ಮಗುನ್ ಮ್ಯಾಲೆ ಬಂದಿದ್ದಿಯಂತಲ್ಲಾ ಎಂದು ತೂರಾಡಿ ನಿಂತ"[೩೦]

ಇದನ್ನು ಗಮನಿಸದ 'ಹೂವ'ನಿಗೆ ಗಡಗಡ ನಡುಗುತ್ತ ಇನ್ಮೇಲೆ ಅಳೂಲೆ, ಹೊಡಿಬೇಡಿ ಹೆಚ್ಚಾಗೇನಾರ ಹೊಡಿದ್ರೆ ನಾ ಎತ್ತಾಗಾರ ವೊಂಟೋಯ್ತಿನಿ, ಎಂದು ಒಂದು ಕೈಯಲ್ಲಿ ಬಾಯಿ ಮುಚ್ಚಿಕೊಂಡರು ದುಃಖಳಿಕೆಯ ದುಃಖವನ್ನು ನುಂಗಿಕೊಳ್ಳುತ್ತಾ ಅಪ್ಪನನ್ನು ಬೇಡಿಕೊಂಡ. ಅವನ ಅಪ್ಪನಿಗೆ ಇದೆನೋ ಕಾಟ ಎನಿಸಿ "ದೇವ್ರು ಬಂದ್ರೆ ವತಾರಿಂದ ಸಂದ್ಗಂಟ ಇರೋದಿಲ್‌ವಲ್ಲಾ, ವಡೀಬ್ಯಾಡ, ವಡುದ್ರೆ ಎತ್ತಗರ ಎದ್‌ಬುಡ್ತಿನಿ ಅಂತಾವ್ನಲ್ಲಾ"[೩೧] ಎಂದು ಮನದಲ್ಲಿ ಅಂದುಕೊಂಡು ಹೇಯ್ ಒಂದೆ ಮಾತಲಿ ವುತ್ರಾ ಕೊಡು ಯಾರು ನೀನು ಎಂದು ಕಿರುಚಿದ.

'ಹೂವ'ನು ಇಷ್ಟಕ್ಕೆ ಭೀತಿಯಿಂದ ಉಚ್ಚೆ ಉಯಿದುಕೊಂಡು ನೀನ್ ದಮ್ಮಾಯ ಹೊಡಿಬೇಡ, ವೊಂಟೋಯ್ತಿನಿ ವಲುತ್ತಾಕೊಯ್ತಿನಿ ಎಂದು ಅವನಪ್ಪನ ಹಾವಭಾವಗಳಿಗೆ ನಡುಗಿ ಹೊರಗೆ ಓಡಲು ಪ್ರಯತ್ನಿಸುತ್ತಾನೆ. ಮತ್ತೆ 'ಹೂವ'ನನ್ನು ಹಿಡಿದು ಲೇ ಹೇಳು ನೀನು ದೇವ್ರೋ ದೆವ್ವನೋ ಎಂದು ಮುಡಿ ಬಿಟ್ಟಿದ್ದ ಉದ್ದನೆಯ ಕೂದಲನ್ನು ಮುಂಗೈಗೆ ನುಲಿದ ಜಡಿದು ಕೇಳಿದ

ಈ ವಿಚಾರವನ್ನು ಗಮನಿಸಿದ್ದರೆ ಮೌಢ್ಯತೆಯು ಅವರಲ್ಲಿ ಒಂದು ವಾಡಿಕೆಯಾಗಿ ಬೆಳೆದು ಬಂದಿದ್ದು, ಒಂದು ಚಿಕ್ಕ ಮಗುವನ್ನು ಪರಿಶೀಲಿಸುವ ಸಂಗತಿಗಳನ್ನು ನೋಡಿದರೆ ಅವರ ಮನಸ್ಸಿನಲ್ಲಿ ಮೂಢನಂಬಿಕೆಯು ಎಷ್ಟೋ ಆಳವಾಗಿ ಅಡಗಿದೆ ಎಂಬುದನ್ನು ಕಾಣುತ್ತೇವೆ.

'ಹೂವ'ನ ಅಪ್ಪನು "ನಿನ್ನ ಅಟ್ಟೂಸುಲುಬ್ದೆಲಿ ಬಿಟ್ಟೆನೇ ನಡೀ ಬನ್ನಿ ಮರತ್ತಕೆ" ಎಂದು ಹಜಾರದಿಂದ ಹೊರಕ್ಕೆ ದರದರದಿಂದ ಎಳೆದುಕೊಂಡು ನನ್ಮಗ್ನ ಮುರ್‍ಕೋಕೆ ಬಂದಿದ್ದಾ. ಅಷ್ಟು ಸುಲುಬ್ದೆಲಿ ಬಿಟ್ಟೇನೆ ಮುರ್‍ಕೋಕೆ ಹೋಗಕ್ಕೆ ಎಂದು ಕುಡಿದ ಅಮಲಿನಲ್ಲಿ ಅವನನ್ನು ಹೊಡೆಯಲು ತೊಡಗಿದ. ಹಳೆಯ ಜನರ ಅತಿಯಾದ ನಂಬಿಕೆಗಳು ಮಕ್ಕಳ ಮೇಲೆ ಭಯವನ್ನು ಉಂಟು ಮಾಡುವ ಸನ್ನಿವೇಶಗಳನ್ನು ಸೃಷ್ಟಿಸುತ್ತವೆ ಎಂಬುದನ್ನು ಇಲ್ಲಿ ಗಮನಿಸಬಹುದು.

'ಹೂವ'ನು ತಂದೆಯ ಅಬ್ಬರಕ್ಕೆ ಸಿಲುಕಿ ನೀನು ಏಳುತ್ತಕ್ಕೆ ವೊಂಟೋಯ್ತಿನಿ ಇನ್ಮೇಲೆ ಅಳೋಲೆ ಎಂದಿದೆ ತಡ, ಉದ್ದದ ಮುಡಿಯನ್ನು ಅಪ್ಪನು ಪಟಕ್ ಎಂದು ಜಡಿದುಕಿತ್ತ, ಬುಡದಿಂದ ರಕ್ತ ಹರಿಯುತ್ತಾ ಅಪ್ಪನು ಕುಣಿಯುತ್ತಾ, ಕೇಡನ್ನು ಗೆದ್ದೆ ಎಂಬ ಉತ್ಸಾಹದಲ್ಲಿ ಬನ್ನಿಮರಕ್ಕೆ ಮೊಳೆಯನ್ನು ಜಡಿಯುತ್ತಿದ್ದಂತೆಯೇ 'ಹೂವ'ನ ಸದ್ದಡಗಿತ್ತು.

ಇದಾದ ಮೇಲೆ ಯಾರೋ ಇಬ್ಬರು 'ಹೂವ' ನನ್ನು ಹೊತ್ತುಕೊಂಡು ಮನೆಗೆ ಹಿಂದಿರುಗಿದರು. ಕಥೆಯಲ್ಲಿ ಲೇಖಕರು ಮೌಢ್ಯತೆ ಎನ್ನುವ ಮಾಹೆಯು ದಲಿತರನ್ನು ವ್ಯಾಪಿಸಿಕೊಂಡು ಅದು ಮುಗ್ಧ ಜನರನ್ನು ಸಂಕಷ್ಟಕ್ಕೆ ಸಿಲುಕಿಸುತ್ತದೆ ಎಂಬುದನ್ನು ಅವೈಜ್ಞಾನಿಕ ಆಚರಣೆಗಳಿಗೆ ಒಳಗಾಗಿ ಇದರ ಅರಿವೆ ಇರದ ಮಗುವನ್ನು ದೆವ್ವ ಹಿಡಿದಿದೆ ಎಂದು ದೈಹಿಕವಾಗಿ ಹಿಂಸಿಸುತ್ತಿರುವುದನ್ನು ಅತ್ಯಂತ ಯಶಸ್ವಿಯಾಗಿ ಅಭಿವ್ಯಕ್ತಿಸಿದ್ದಾರೆ. ಈ ಮೂಲಕ ಸಂಪ್ರದಾಯ ಮತ್ತು ನಂಬಿಕೆಗಳ ಮೌಢ್ಯದ ನೆಲೆಗಳನ್ನು ವಿಮರ್ಶಿಸಿದ್ದಾರೆ.

**'ಕೊಂಡ'** ಕಥೆಯು ಸಮಕಾಲೀನ ಬಲಿಷ್ಠ ವರ್ಗದ ರಾಜಕೀಯ ವ್ಯವಸ್ಥೆಯು ಮುಗ್ಧ ದಲಿತರನ್ನು ಯಾವ ರೀತಿಯಲ್ಲಿ ಆಹುತಿ ಮಾಡುತ್ತದೆ ಎಂಬುದನ್ನು ಹೇಳುವುದರ ಜೊತೆಗೆ ಸಮಾಜ ಹೇಗೆ ಜನರ ಬದುಕನ್ನು ಕಸಿದುಕೊಳ್ಳುತ್ತದೆ ಎಂಬುದನ್ನು ಕಾಣಬಹುದು. ಮುಪ್ಪಾದ ರಂಗೇಗೌಡರನ್ನು ಅವರ ಮಕ್ಕಳು ಮನೆಯಿಂದ ಹೊರದಬ್ಬಿ ಊರ ಮಾರಿಗುಡಿಯಲ್ಲಿ ಬದುಕುವಂತೆ ಮಾಡುವುದು. ರಂಗೇಗೌಡರು ಊರ ಹೊಗೇರಿಯವರ ಮಾನವೀಯ ಬಂದತ್ವದ ತಾಯ್ತನದ ಅಂತಃಕರಣದಿಂದ ರಂಗೇಗೌಡರನ್ನು ಕೊನೆಗಾಲದವರೆಗೂ ನೋಡಿಕೊಳ್ಳುವುದು ಒಂದು ರೀತಿಯಲ್ಲಿ ಹೊಸ ಬಗೆಯ ಸಾಂಸ್ಕೃತಿ ಮುಖಾಮುಖಿಯಾಗಿವೆ. ಹೊಲಗೇರಿಯವರು ಕೊಟ್ಟಂತಹ ರಾಗಿಮುದ್ದೆ, ಉಪ್ಪಿನೆಸರನ್ನು ಅವರ ಪ್ರೀತಿಯಿಂದ ಸವಿಯುತ್ತಾರೆ. ಇಲ್ಲಿ ರಂಗೇಗೌಡ ಅವರ ಒಂದು ಸಮುದಾಯದ ಬದ್ಧತೆಯನ್ನು, ಆಚಾರವನ್ನು ಮುರಿದು ಸಾಂಸ್ಕೃತಿಕವಾಗಿ ಬೆರೆಯುವ ಸಮಾಜದ ಪ್ರಜ್ಞಾವಂತ ವ್ಯಕ್ತಿಯಾಗಿ ಕಂಡುಬರುತ್ತಾರೆ. ಇವರ ಒಂದು ನಿಲುವು ಸಮಸಮಾಜದ ನಿರ್ಮಾಣದಲ್ಲಿ ಕೆಲಸ ಮಾಡುತ್ತದೆ. ಮಾನವತವಾದದ ನೈತಿಕ ನೆಲೆಗಟ್ಟಿನ ಆಶಯವನ್ನು ನಾವಿಲ್ಲಿ ಕಾಣಬಹುದು.

ಕಥೆಯ ಪ್ರಾರಂಭದಲ್ಲಿ ಚಿಕ್ಕಣ್ಣನ ಪಾತ್ರ ವಿಶಿಷ್ಟವಾಗಿ ಗ್ರಾಮ್ಯಸೊಗಡನ್ನು ತಿಳಿಸುತ್ತದೆ. ಅದು ಹೊತ್ತು ತಲೆ ಮೇಲೆ ಏರುವ ಮೊದಲೇ ಚಿಕ್ಕಣ್ಣ ಪೇಟೆಗೆ ಹೋಗಿ ಒಂದು ಮಡಿಕೆ ಎಂಡವ ತಂದು ಕುಡಿದು ಹಿತ್ತಿಲ ಕೊಟ್ಟಿಗೆಯಲ್ಲಿ ಮುಚ್ಚಿಟ್ಟಿದ್ದ. ತನ್ನವರಿಗೆಲ್ಲ ಕುಡಿಸಿ, ಮತ್ತೇರಿಸಿ ರಂಗುರಂಗ ಸ್ಥಳದಲ್ಲಿ ವೀರಾಧಿವೀರನಂತೆ ವಿಜೃಂಭಿಸಿ ಕುಣಿದು ಕೇಕೆ ಹಾಕಿ ಸುತ್ತೇಳು ಹಳ್ಳಿಗಳಿಗೂ ಸಾಕಾಗಿ ಉಳಿಯುವಷ್ಟು ಎಂತೆಂತದೊ ಕತ್ತಲ ಲೋಕದ ನೀಲಿನಕ್ಷೆಗಳನ್ನು ಹಾಕಿ ಅವನ್ನೆಲ್ಲ ಬಾಯಲ್ಲೇ ಅಲ್ಲೇ ಗುಂಪಾಗಿ ಅಭಿನಯಿಸಿ ಹಾಡಿ, ನಗಾಡಿ ಯಾರ್‍ಯಾರನ್ನೋ ಬೈಯ್ದು ಕೊನೆಗೆ ಆ ಎಲ್ಲ ಹತ್ತಾರು ಯೋಚನೆಗಳನ್ನೂ ಅಲ್ಲೇ ಬಿಸಾಡಿ ನಿದ್ರೆಯ ಗೊರಕೆಯಲ್ಲಿ ಅದನ್ನೊಮ್ಮೆ ಬಾಯಲ್ಲಿ ಅಗಿದು, ಉಗಿದು, ಮಗ್ಗಲು ಬದಲಿಸಿ ಎದ್ದು ಎಲ್ಲೆಲ್ಲೋ ಹೊರಟು ಹೋಗುತ್ತಿದ್ದ. ಯಾವತ್ತೂ ಮುಗಿಯದ ಅಶಾಂತ ಉರಿಯಂತ ಪ್ರತಿರಾತ್ರಿ, ಉದ್ದಕ್ಕೂ ತನ್ನ ಬಂಟರನ್ನು ಕಟ್ಟಿಕೊಂಡು ಅಮಲು ತಾರಕದಲ್ಲಿ ಕೂಗಾಡಿ ಜಗಳ ತೆಗೆದು ಮೆರೆಯುವುದು ತುಂಬ ಸಾಮಾನ್ಯವಾಗಿ ಬಿಟ್ಟಿತ್ತು. ಕೇರಿಯ ಜನ ಅದನ್ನೆಲ್ಲ ಒಪ್ಪಿದಂತೆಯೋ ಒಪ್ಪದೇ ಮೌನವಾಗಿ ಉಪೇಕ್ಷಿಸಿದಂತೆ ಮಾಡುತ್ತಿದ್ದರೇ ಹೊರತು ಚಿಕ್ಕಣ್ಣನಿಗೆ ಬುದ್ಧಿ ಹೇಳುವ ಧೈರ್ಯವನ್ನು ಯಾರೂ ಮಾಡುತ್ತಿರಲಿಲ್ಲ.

ಕತೆಯಲ್ಲಿ ಬರುವ ಚಿಕ್ಕಣ್ಣ ದಲಿತನಾಗಿ ಸ್ವಾಭಿಮನದ ಬದುಕನ್ನು ನಡೆಸುವ ತವಕದಲ್ಲಿದ್ದರೆ ಇದಕ್ಕೆ ವಿರುದ್ಧವಾಗಿ ರುದ್ರನ ನಡತೆಯಿದೆ. ಇವರಿಬ್ಬರ ದ್ವೇಷಕ್ಕೆ ಚಿಕ್ಕಣ್ಣನ ತಂಗಿಯ ಬದುಕು ರುದ್ರನ ಅತ್ಯಾಚಾರದಿಂದ ಮುದುಡಿ ಹೋಗುತ್ತದೆ. ರುದ್ರ ಇದನ್ನು ಮರೆ ಮಾಚುವುದಕ್ಕಾಗಿ ದೇವರೆಂಬ ರಕ್ಷಾ ಕವಚವನ್ನು ಮೈದುಂಬಿಸಿಕೊಂಡು ಸುಲಭವಾಗಿ ಪಾರಾಗುತ್ತಾನೆ.



ಸಮಾಜದಲ್ಲಿ ಇಂತಹ ಎಷ್ಟೋ ಸಂಗತಿಗಳು ದೇವರ ಹೆಸರಿನಲ್ಲಿ ನಡೆಯುವುದನ್ನು ಕಾಣಬಹುದು. ಬ್ರಾಹ್ಮಣರು ಉಂಡ ಎಂಜಲು ಎಲೆಯ ಮೇಲೆ ದಲಿತರು ಉರುಳು ಸೇವೆ ಮಾಡುವ ಕ್ರೂರ ವ್ಯವಸ್ಥೆಯನ್ನು ವೈದಿಕ ಸಂಸ್ಕೃತಿ ನಿರ್ಮಿಸಿದೆ. ಇದು ನಮ್ಮ ಸಂಸ್ಕೃತಿಗೆ ಅಂಟಿರುವ ಪಿಡುಗು. ಹಾಗಾಗಿ ನಾವು ಹೆಚ್ಚು ಶಿಕ್ಷಣವಂತರಾಗಿ ಸಮಾಜದ ಸೂಕ್ಷ್ಮತೆಯನ್ನು ಅರಿತು ನಿಸರ್ಗ ಬದುಕನ್ನು 'ಮನುಷ್ಯ ಜಾತಿ ತಾನೊಂದು ವಲಂ' ಮಹಾಕವಿ ಪಂಪನ ಸಮಾನತೆ ಭಾವನೆಯನ್ನು ನಾವೆಲ್ಲರೂ ಅರಿಯಬಹುದು. ಶಿಕ್ಷಣದಿಂದ ವಂಚಿತರಾದ ದಲಿತರು ಬ್ರಾಹ್ಮಣ. ಬ್ರಾಹ್ಮಣೇತರ ಸ್ಪೃಶ್ಯ ಸವರ್ಣೀಯರು ಮಾಡುವ ವಂಚನೆಯನ್ನು ಅರ್ಥ ಮಾಡಿಕೊಂಡು ಪ್ರತಿಭಟಿಸುವ ಯಾವ ತರಹದ ಪ್ರಜ್ಞೆಯನ್ನು ಮೈಗೂಡಿಸಿಕೊಂಡಿಲ್ಲ.

ಇಂದಿನ ಶಿಕ್ಷಣ ಪಡೆದ ದಲಿತರಲ್ಲಿ ಈ ಬಗೆಯ ಎಚ್ಚರಿಕೆಗಳು ಮೂಡಿದ್ದರೂ ಇಂದಿಗೂ ಭಾರತೀಯ ಗ್ರಾಮೀಣ ಸಮಾಜಿಕ ಸಂದರ್ಭದಲ್ಲಿ ಮೇಲ್ವರ್ಗದ ಜನಾಂಗದ ಕುತಂತ್ರಕ್ಕೆ ದಲಿತರು ಬಲಿಯಾಗುತ್ತಿರುವುದು ದುರಂತವೇ ಸರಿ. ಇಲ್ಲಿ ಚಿಕ್ಕಣ್ಣ ಮತ್ತು ರುದ್ರನ ನಡುವಿನ ದ್ವೇಷವನ್ನು ಕೆಂಚೇಗೌಡರು ತನ್ನ ರಾಜಕೀಯ ಲಾಭಕ್ಕಾಗಿ ಬಳಸಿಕೊಳ್ಳುತ್ತಾರೆ. ಅಲ್ಲದೆ ಇವರಿಬ್ಬರು ಪರಸ್ಪರ ಹೊಡೆದಾಡಿಕೊಂಡು ಕೊಂಡದಲ್ಲಿ ಪ್ರಾಣ ಕಳೆದುಕೊಳ್ಳುವ ಹಾಗೆ ಮಾಡುತ್ತಾನೆ. ಜಾತಿಯಲ್ಲಿ ಚಿಕ್ಕಣ್ಣ ಅಸ್ಪೃಶ್ಯನಾದ್ದರಿಂದ ಅವನ ವರ್ತನೆ ಮೇಲ್ವರ್ಗದವರಿಗೆ ಸಹಿಸಲಾಗುವುದಿಲ್ಲ. ಪ್ರಸ್ತುತ ಕಥೆಯೂ ರಾಜಕಾರಣವೂ ತಳಸಮುದಾಯವನ್ನು ಹತ್ತಿಕ್ಕಲು ನಡೆಸುವ ಕುತಂತ್ರವನ್ನು ಸೂಕ್ಷ್ಮವಾಗಿ ತಿಳಿಸುತ್ತದೆ.

ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು ಜನರ ಬದುಕಿನಲ್ಲಿ ಹೇಗೆ ಕಂಡುಬರುತ್ತವೆ ಮತ್ತು ಆ ಮೂಲಕ ಇಡೀ ವ್ಯವಸ್ಥೆಯನ್ನು ಪ್ರಗತಿಪಥದ ಹಾದಿಯಲ್ಲಿ ನಡೆಸುವ ಒಂದು ಕ್ರಿಯೆ ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಕೆಲವು ಕಥೆಗಳನ್ನು ಮಾತ್ರ ಅಧ್ಯಯನ ಮಾಡಲು ಸಾಧ್ಯವಾಗಿದೆ. ಇದು ಅಧ್ಯಯನದ ಮಿತಿಯೂ ಕೂಡ. ಸಂಸ್ಕೃತಿ ಎನ್ನುವುದು ಬದಲಾವಣೆ ಸಮಾಜವನ್ನು ಅದೇ ಹಾದಿಯಲ್ಲಿ ಮುನ್ನಡೆಸುತ್ತದೆ. ದಲಿತರು ಇನ್ನೂ ಸ್ವಾತಂತ್ರ್ಯದ ಅಂತರ್ಜಲದ ದಾಹದಲ್ಲೇ ಗತಕಾಲದ ಸಂಸ್ಕೃತಿಯನ್ನು ಹೊಸಕಾಲದ

ಕನಸುಗಳನ್ನು ಒಟ್ಟಾಗಿ ತಮ್ಮ ಅಸ್ತಿತ್ವದ ನುಡಿಯಾಗಿಸಿಕೊಳ್ಳಲು ಸಂಬಂಧವಿದ್ದು, ಬದಲಾವಣೆಯನ್ನು ಕಂಡುಕೊಳ್ಳುತ್ತಿರುತ್ತವೆ.

ಕಥೆಯಲ್ಲಿ ಮಾರಿಗುಡಿಯ ಪ್ರಸಂಗ ಬಲುವಿಶಿಷ್ಟವಾಗಿ ಗೋಚರಿಸುತ್ತದೆ. ಮಾರಿಗುಡಿಯ ಸುತ್ತೆಲ್ಲ ಮಾಯಾವಿಯಂತೆ ಹಬ್ಬುತ್ತಾ ಊರನ್ನೂ ಮುತ್ತಿಕೊಳ್ಳುತ್ತಿತ್ತು. ರುದ್ರಣ್ಣನನ್ನು ಕೊಂಡ ಹಾಯುವ ಹೊತ್ತಿನಲ್ಲೇ ಮುಗಿಸಲು ಕೆಂಚೇಗೌಡರು ಸಂಚು ಮಾಡಿ ಅತ್ಯಂತ ನಿಗೂಢವಾಗಿ ಆಳುಗಳನ್ನು ಕೊಂಡದ ಎರಡೂ ದಿಬ್ಬಗಳ ಮೇಲೆ ಬಿಟ್ಟಿದ್ದರು. ಚಿಕ್ಕಣ್ಣನಿಗೂ ಕೆಂಚೇಗೌಡರು ಹೇಳಬೇಕಾಗಿದ್ದನ್ನು ಹೇಳಿದ್ದರಾದರೂ ಈಗದೆಲ್ಲವೂ ಹೆಣವಾಗಿತ್ತು. ರುದ್ರಣ್ಣ ಕೊಂಡ ಹಾದು ಮದ್ಯಕ್ಕೆ ಬರುವ ಹೊತ್ತಿಗೆ ಕೊಂಡದ ಬಾಯಿಗೆ ಅದೇನನ್ನೋ ಮಂತ್ರಿಸಿದ್ದನ್ನು ಹಾಕಿ ಅದರಿಂದ ಮುಗಿಲುದ್ದ ಹೊಗೆ ಏಳುವಂತೆ ಮಾಡಿ ಆ ಹೊಗೆಯಿಂದ ಉಸಿರುಗಟ್ಟಿ ದಾರಿ ಕಾಣದಾಗಿ ಆತ ಅಲ್ಲೆ ಬಿದ್ದು ಹೋಗುವಂತೆ ಸಂಚು ಮಾಡಿ ಒಂದು ವೇಳೆ ಆತ ಕೆಳಗೆ ಬಿದ್ದಿದ್ದರೂ ಉದ್ದವಾದ ಬೊಂಬುಗಳಿಂದ ಆ ಹೊಗೆಯ ಮರೆಯಲ್ಲಿ ಯಾರಿಗೂ ಕಾಣದಂತೆ ಅದುಮಿ ಅವನೇ ಮಾರವ್ವನಿಗೆ ಬಲಿಯಾಗಿ ಕೊನೆಗೆ ರುದ್ರಣ್ಣನೇ ಆಯತಪ್ಪಿದ್ದರಿಂದ ಆ ತಾಯಿ ಮಾರವ್ವನೇ ಅವನನ್ನು ಬಲಿತೆಗೆದುಕೊಂಡಳೆಂದು ಪುರಾಣ ಕಟ್ಟಿ ಎಲ್ಲರಿಂದ ಬಚಾವಾಗಲು ಕೆಂಚೇಗೌಡರು ನಿರ್ಧರಿಸಿದ್ದರು. ಚಿಕ್ಕಣ್ಣ ಕೆಳಗುರುಳಿದ್ದನ್ನು ಕಂಡು ಲೆಕ್ಕಾಚಾರ ತಲೆಕೆಳಗಾಗಿ ಕೊಂಡದಿಂದ ಹೊಗೆ ಹೇಳುವ ಮೊದಲೇ ರುದ್ರಣ್ಣ ಎಲ್ಲದರಿಂದಲೂ ಪಾರಾಗಿ ಈಗ ಭದ್ರವಾಗಿ ಮಾರವ್ವನ ಗರ್ಭ ಗುಡಿಯಲ್ಲಿ ಕಂಪಿಸುತ್ತ ಮುಂದಿನದಕ್ಕೆ ಸಿದ್ದವಾಗುತ್ತಿದ್ದ.

ಕಥೆಯಲ್ಲಿ ಇಡೀ ಗ್ರಾಮ್ಯಜೀವನದ ಸೊಗಡು ನಿಂತ ನೀರಲ್ಲದೇ ಹರಿಯುವ ನೀರಾಗುವಂತೆ ಪ್ರತಿ ಘಟನೆಯಲ್ಲೂ ಗ್ರಾಮೀನ ಜನ ಜೀವನವನ್ನು ನಿವೇದಕರು ಅಭಿವ್ಯಕ್ತಿಸುತ್ತಾರೆ. ಇಡೀ ಊರು ನಡುಗತೊಡಗಿತು. ಆ ಹೊಗೆ ಅಸಾಧ್ಯವಾಗಿ ಭೂತಾಯಿ ಒಡಲಿಂದ ಕೊಂಡದ ಉರಿಯಿಂದ ನುಗ್ಗಿ ಬರುವಂತೆ ವ್ಯಾಪಿಸುತ್ತಿತ್ತು. ಆ ಹೊಗೆಯಲ್ಲಿ ಎಲ್ಲರೂ ಹುಡುಕಾಡುತ್ತಿದ್ದರು. ಗಾಂಧೀಜಿಯ ಹೇ ರಾಮ್ ಉದ್ಗಾರವನ್ನು ನೆನೆಯುತ್ತ ರಂಗೇಗೌಡರು ಕೆಳಗೆ ಬಿದ್ದಿದ್ದರು. ಯಾರ್‍ಯಾರೋ ಒಬ್ಬರನ್ನೊಬ್ಬರು ತುಳಿಯುತ್ತಿದ್ದರು. ಬಲವಾದವರು ಎದ್ದು ಓಡುತ್ತಿದ್ದರು. ಸೀನಿ ಕೆಂಪಿಯನ್ನು ತಬ್ಬಿಕೊಂಡು ಗೋಳೋ ಎಂದು ಅಳುತ್ತಿದ್ದ. ಕೆಂಪಿ ಏನನ್ನೂ ಮಾಡಲಾರದವನಾಗಿ ಹೊಗೆಯಲ್ಲೇ ಮಗನನ್ನು ಕಿಬ್ಬೊಟ್ಟೆಗೆ ಹೊತ್ತಿಕೊಂಡು ಬಿದ್ದಿದ್ದಳು ಮೆಲ್ಲಮೆಲ್ಲನೆ ಎದ್ದು ಮತ್ತೆ ಆ ಕೊಂಡದ ಕಡೆಗೆ ತೆವಳುತ್ತಾ ಗಂಡ ಯಾವ ಜಾಗದಲ್ಲಿ ಹೆಣವಾಗಿ ಬಿದ್ದಿರುವನೋ ಎಂದು ಹುಡುಕಾಡುತ್ತಿದ್ದಳು. ಮಾರವ್ವ

ಕ್ರೋಧದಿಂದ ಆವೇಶದಿಮದ ಊರಿನ ಮೇಲೆ ಕೆಂಡಕಾರಿದ್ದಾಳೆಂದು ಆಗಲೇ ಕತೆಗಳು ಬಾಯಿಬಿಡುತ್ತಿದ್ದವು. ಕೆಂಚೇಗೌಡರು ಒಂದೇ ಸಂಚಿನಲ್ಲಿ ರುದ್ರಣ್ಣನನ್ನು ಚಿಕ್ಕಣ್ಣನನ್ನು ಹತರಾಗಿಸಲು ಯೋಚಿಸಿದ್ದವರು ಈಗ ಮರೆಯಲ್ಲಿ ಮುಂದೇನಾಗಬಹುದೆಂದು ಲೆಕ್ಕಿಸುತ್ತಿದ್ದರು. ಹೀಗೆ ವಿಭಿನ್ನ ನೆಲೆಯಲ್ಲಿ ಸಂಚು ಹುಡುವ ಕ್ರಿಯೆ ಗ್ರಾಮೀಣರ ಮೂಢನಂಬಿಕೆ, ಗರ್ವ, ಜಾತಿವ್ಯವಸ್ಥೆ ಇವುಗಳು ಬಹಳ ನಿಷ್ಠೂರವಾಗಿ ಗೋಚರಿಸುತ್ತವೆ.

ಹಬ್ಬದ ಪ್ರಸಂಗದಲ್ಲಿ ಹೊಲಗೇರಿ ಸ್ಮಶಾನದಂತೆ ಬಿದ್ದುಕೊಂಡಿತ್ತು. ಹಬ್ಬ ನೆಂಟರೆಲ್ಲ ದಣಿದು ಹೋಗಿದ್ದರು. ಅನೇಕರು ಈ ಘಟನೆ ಆದ ಮೇಲೆ ಒಂದು ಕ್ಷಣವೂ ನಿಲ್ಲದೆ ಬಂದ ದಾರಿಯಲ್ಲೇ ತಮ್ಮ ಊರುಗಳ ಕಡೆ ಓಡಿಹೋಗಿದ್ದರು. ಬಲಿಗಾಗಿ ಶೃಂಗಾರ ಮಾಡಿಸಿಕೊಂಡು ಕಟ್ಟಿ ತಂದಿದ್ದ ಕೋಣಗಳು ದಿಕ್ಕಾಪಾಲಾಗಿ ಎಲ್ಲೆಲ್ಲೋ ಹೋಗಿ ಬೆದರಿ ಸದ್ಯ ಬದುಕುಳಿದು ಬಂದೆವಲ್ಲ ಎಮದು ಬಾಯಿಗೆ ಸಿಕ್ಕಿದ ಮೇವನ್ನು ಮೇಯಲು ಪ್ರಯತ್ನಿಸುತ್ತಿದ್ದವು. ಸಾಕಿ ಆನಂದ ಇಬ್ಬರೂ ಸುಮ್ಮನೆ ಪಡಸಾಲೆಯಲ್ಲಿ ಕುಳಿತು ಆಕಾಶ ಕಡೆ ನೋಡುತ್ತಾ ಮುಂದೇನು ಕಾದಿದೆಯೋ ಎಂದು ಊಹಿಸುತ್ತಿದ್ದರು. ಮಾರಿಗುಡಿಯ ಕಡೆಯಿಂದ ಹರಿದು ಬರುತ್ತಿದ್ದ ಹೊಗೆಯೀಗ ಕಡಿಮೆಯಾಗುತ್ತಿತ್ತು. ಮಾರವ್ವನ ಪೂಜಾರಿ ರುದ್ರಣ್ಣನನ್ನು ಯಾವ ಕಾಯಿದೆಯೂ ಪೊಲೀಸೂ ಯಾರೂ ಬಂದರೂ ಅರೆಸ್ಟ್ ಮಾಡಲು ಸಾಧ್ಯ ಎಲ್ಲೆಂದು ಅವನ ಕಡೆಯವರು ವಕಲತ್ತು ವಹಿಸುತ್ತಾ ದೇವರೆ ಅವನನ್ನು ಕೊಂದಿರುವುದರಿಂದ ಇದರಲ್ಲಿ ರುದ್ರಣ್ಣ ಕೇವಲ ದೇವರ ಒಂದು ನೆಪ ಅಷಟೆ. ಅಂತಹ ಹೊತ್ತಲ್ಲಿ ದೇವರು ಉಗ್ರವಾಗಿ ಮೈದುಂಬಿರುವಾಗ ಎನೋ ಅತಾಚುರ್ಯ ಘಟಿಸಿರ–ಬಹುದೆಂದು ಎಲ್ಲವನ್ನೂ ಮುಚ್ಚಿಸಬಹುದೆಂದು ಅವರವರು ಮಾತನಾಡಿಕೊಳ್ಳುತ್ತಿದ್ದರು. ಗ್ರಾಮೀಣ ಜನರು ಸಲೀಸಾಗಿ ದೇವರನ್ನೂ ನಂಬುತ್ತಾರೆ. ಹಾಗೆಯೇ ಆ ಜನರಿಗೆ ಸ್ವತಃ ಯೋಚಿಸುವ ತಾಳ್ಮೆ ಕಡಿಮೆ, ಸ್ವಲ್ಪಮಂದಿಗೆ ಯೋಚಿಸುವ ಪ್ರಜ್ಞೆ, ಶಕ್ತಿ ಇದ್ದರೂ ಹೇಳಲಾರದಷ್ಟು ಸಂಕಷ್ಟ ಎದುರಾಗುತ್ತವೆ ಎನ್ನುವ ಭಯ ಎತೇಚ್ಚವಾಗಿ ಕಂಡುಬರುತ್ತವೆ.

ಇದನ್ನೆಲ್ಲಾ ಗಮನಿಸಿದ್ದ ಸೀನಿಯು ಹಿತ್ತಿಲ ಕೊಟ್ಟಿಗೆಯಲ್ಲೇ ಕುಳಿತಿದ್ದ. ಮನೆಯ ಒಂದೊಂದು ಚಿತ್ರಗಳೂ ಊರಿನ ಒಂದೊಂದು ಘಟನೆಗಲೂ ಎಲ್ಲವೂ ಮಿಳಿತವಾಗುತ್ತಾ ದುಃಖವನ್ನು ತಡೆಯಲಾರದೆ ಕಂಬನಿಗರೆಯುತ್ತಿದ್ದ. ಹುಚ್ಚು ಆವೇಶದ ಕೊಂಡದ ನಿಗಿನಿಗಿ ಕೆಂಡದ ಹಬ್ಬದ ನಾಲಿಗೆ ಈಗ ಎಲ್ಲರನ್ನೂ ನೆಕ್ಕಿನೆಕ್ಕಿ ನೋಡುತ್ತಿತ್ತು. ಕಾಲ ಜಾರುತ್ತಿತ್ತು. ಊರು ಎಲ್ಲೆಲ್ಲಿಗೋ ಚಲಿಸುತ್ತಿತ್ತು. ಹೊಗೆ, ಆವಿಯಾದಂತೆ ಎಲ್ಲೋ ಯಾರ್‍ಯಾರ ಮನದ ಒಳಪದರಗಳಲ್ಲೋ ಲೀನವಾಗುತ್ತಿತ್ತು. ಕೆಂಚೇಗೌಡರು ಮುಂದಿನ ಎಲ್ಲ ಕ್ರಮಗಳಿಗೂ ತಮ್ಮ

ಜನರನ್ನು ಸಿದ್ಧಮಾಡುತ್ತಿದ್ದರು. ಹೊಲಗೇರಿಯ ಓದುವ ಹುಡುಗರು ಏನನ್ನೋ ಆಳವಾಗಿ ಲೆಕ್ಕಿಸುತ್ತಿರುವಂತೆ ಅಟ್ಟಿಗುಡಿಯ ಪಡಸಾಲೆಯಲ್ಲಿ ಕುಳಿತು ಮಾತನಾಡುತ್ತಿದ್ದರು. ರಾತ್ರಿಯ ನೀರವ ಕತ್ತಲು ಕುಣಿಯುತ್ತಿತ್ತು. ಸಾಕಿ ಗುಡಿಯ ಉದ್ದವಾ ಗೋಡೆಸಾಲಿನ ಮೇಲಿಟ್ಟಿದ್ದ ಎಲ್ಲ ದೀಪಗಳಿಗೂ ಎಣ್ಣೆಬಿಟ್ಟು ಬಿಟ್ಟು ಬತ್ತಿ ಎತ್ತಿ ಸರಿಯಾಗಿ ಹಚ್ಚಿ ಆ ನಡುರಾತ್ರಿಯ ಕತ್ತಲಲ್ಲೂ ಯಾವುದೋ ಲೋಕದ ದೇವತೆಯಂತೆ ಕಾಣುತ್ತಿದ್ದಳು. ಕೊಟ್ಟಿಗೆಯ ಲಾಟೀನಿನ ಚೆಂಬೆಳಕಲ್ಲಿ ಸೀನಿ ನಿದ್ದೆಯನ್ನೇ ಕಾಣದೆ ಹಾಗೇ ಅನಂತವನ್ನು ದಿಟ್ಟವಾಗಿ ನೆಟ್ಟ ನೋಟದಿಂದ ದಿಟ್ಟಿಸುವಂತೆ ಒದ್ದೆಯಾದ ಕಣ್ಣುಗಳಲ್ಲಿ ಕುಳಿತೇ ಇದ್ದ. ಅವನ ಅವ್ವ ಕೆಂಪಿಯ ಆಲಾಪ ಗಾಳಿಯಲ್ಲಿ ಬೀಸುತ್ತಲೇ ಇತ್ತು ಎನ್ನುವ ಒಂದು ಹೀನಾಯ ಬದುಕನ್ನು ಗ್ರಾಮೀಣ ಜನರ ಭಯ, ಭಕ್ತಿ ಜನರ ನಿತ್ಯಜೀವನಕ್ಕೆ ಎತೇಚ್ಚವಾಗಿ ಪರಿಣಾಮಕಾರಿಯಾಗಿ ಪ್ರಶ್ನಿಸಲು ಆಗದ ಸ್ಥಿತಿಗೆ ಹೋಗುವುದನ್ನು ನಾವು 'ಕೊಂಡ' ಎಂಬ ಕಥೆಯಲ್ಲಿ ಸ್ಪಷ್ಟವಾಗಿ ತಿಳಿಯಲಾಗುತ್ತದೆ. ಲೇಖಕರು ಸಮಾಜದಲ್ಲಿ ಹಲವು ಮುಖಗಳನ್ನು ವಿಭಿನ್ನ ನೆಲೆಗಟ್ಟಿನಲ್ಲಿ ಇಂತಹ ಘಟನಾವಳಿಗಳನ್ನು ಅಭಿವ್ಯಕ್ತಿಸಿರುವುದು ಅವರ ಅನುಭವದ ಚಿತ್ರಣವಾಗಿದೆ. ಒಟ್ಟಾರೆ ಸಮಾಜದ ಅರಿವು ಕುರುಹುಗಳನ್ನು ಮುಖಾಮುಖಿ ಮಾಡಿರುವುದುನ್ನು ಕಾಣಲಾಗಿದೆ. ಇಡೀ ಭಾರತದ ಸಾಮಾಜಿಕ ವ್ಯವಸ್ಥೆಯ ಅನೇಕ ಪಲ್ಲಟಗಳನ್ನು ವೇಗದಿಂದ ಮಾಡಿಕೊಳ್ಳುತ್ತಿದೆ. ದಲಿತ ಸಂಸ್ಕೃತಿ ಎನ್ನುವುದು ಒಂದು ಜೀವನ ಕ್ರಮ ಎಲ್ಲ ಸಂಸ್ಕೃತಿಗಳು ಜೀವನ ಕ್ರಮಗಳೇ ಆದರೂ ಎಲ್ಲಾ ಸಂಸ್ಕೃತಿಗಳು ತಮ್ಮ ಪೂರ್ವಿಕರ ಪ್ರಜ್ಞೆಯಿಂದ ಬದುಕುವ ಹೋರಾಟದಲ್ಲಿ ಸ್ಥಳೀಯವಾದ ಸವಲತ್ತುಗಳಿಂದ ಮತ್ತು ಬದುಕುವ ಕ್ರಮದಿಂದ ಬೇರೆ ಬೇರೆ ಚಹರೆಯನ್ನು ಅಂತರ್ಗತಿಸಿಕೊಂಡಿರುತ್ತವೆ. ಜೀವಜಾಲದಲ್ಲಿ ಹೇಗೆ ಅಸ್ಥಿತ್ವದ ಕಾರಣಕ್ಕೆ ಬಹುರೂಪಿಯಾದ ಹೊಂದಾಣಿಕೆಯ ಅನುಸಂಧಾನವನ್ನು ಮಾಡಿಕೊಂಡಿರಲಾಗುತ್ತದೆಯೋ ಅದರಂತೆಯೇ ಸಮುದಾಯಗಳು ಸಂಸ್ಕೃತಿಯ ವಿಕಾಸದಲ್ಲಿ ಹಲವು ಹೊಂದಾಣಿಕೆಯನ್ನು ಮಾಡಿಕೊಂಡು ಮೌಲ್ಯ ವ್ಯವಸ್ಥೆಯನ್ನು ನಿರ್ಮಿಸಿಕೊಂಡಿರುತ್ತವೆ. ಆದರೆ ಈ ವ್ಯವಸ್ಥೆಯಲ್ಲಿ ಸಂಸ್ಕೃತಿಯ ಅಪರಿಪೂರ್ಣ ನಂಬಿಕೆಯ ಮೂಲಕವೇ ಸದಾ ವಿಕಾಸಕ್ಕೆ ಒಳಪಡುತ್ತಿರುತ್ತದೆ. ಇದರಿಂದಾಗಿ ಸಂಸ್ಕೃತಿಗಳು ಬಹುರೂಪಗೊಮಡು ಅವರವರ ಅಸ್ತಿತ್ವವನ್ನು ನಿರೂಪಿಸುವ ಜೀವನ ಕ್ರಮಗಳಾಗಿರುತ್ತವೆ. ಸಂಸ್ಕೃತಿಯ ಸ್ವಭಾವವೇ ಮನುಷ್ಯ ಕೇಂದ್ರಿತವಾದುದು.

ಪ್ರಕೃತಿಯನ್ನು ಆರಾಧಿಸುವ ಸಂಸ್ಕೃತಿಯ ವರ್ತನೆಗಳು ಮನುಷ್ಯನ ಅಸ್ತಿತ್ವವನ್ನು ಆ ಆರಾಧನೆಯಿಂದಲೇ ಬಲಗೊಳಿಸಿಕೊಳ್ಳಲು ಯತ್ನಿಸುತ್ತವೆ. ಸಂಸ್ಕೃತಿಯು ಸೃಜನಶೀಲ–ವಾದುದು. ಸೃಜನಶೀಲವಾದ ಧ್ಯಾನ ಮತ್ತು ಆಚಾರಗಳು ಮನುಷ್ಯ ಅಭಿವ್ಯಕ್ತಿಯನ್ನು

ಬೃಹತ್ತಾಗಿ ರೂಪಿಸಬಲ್ಲವು. ಸೃಜನಶೀಲವಾಗಿರುವುದರಿಂದಲೇ ಬಹು ಬಗೆಯ ನಂಬಿಕೆಗಳು ಹುಟ್ಟುವುದು. ಇಂತಹ ನಂಬಿಕೆಗಳು ಕಿರಿದಾದ ಅವಕಾಶವನ್ನು ರೂಪಿಸಿದರೂ ಅವರವರ ಅಸ್ತಿತ್ವಕ್ಕೆ ಅವಶ್ಯವಾಗಿರುತ್ತದೆ. ಒಂದೊಂದು ಸಮುದಾಯವೂ ತನ್ನ ಸಂಸ್ಕೃತಿಯ ರೀತಿ ನೀತಿಗಳಿಂದಲೇ ಜಗತ್ತನ್ನು ಕಂಡುಕೊಂಡಿವೆ. ಈ ಸೃಜನಶೀಲವಾದ ಸಂಸ್ಕೃತಿಯು ಸಮಾಜದ ಮೇಲೆ ಪ್ರಭಾವ ಬೀರಿ ಅದರ ಒಂದು ಸ್ಥಿತ್ಯಂತರವನ್ನು ಬಯಸುತ್ತದೆ. ಸಂಪ್ರದಾಯ ಮತ್ತು ಸಮಾಕ ಎನ್ನುವುದು ಒಂದಕ್ಕೊಂದು ಬೆರೆತು ಕೊಂಡಿರುತ್ತದೆ. ಮೊಗಳ್ಳಿಯವರ ಕಥೆಗಳಲ್ಲಿಯೂ ಸ್ಥಿತ್ಯಂತರಗಳು ಕಂಡುಬರುತ್ತವೆ. ದಲಿತರ ನೆಲೆಯು ತೀರಾ ಹೀನಾಯ ಸ್ಥಿತಿಗೆ ಹೋಗಿರುವುದು ಅಲ್ಲಲ್ಲಿ ಸೂಕ್ಷ್ಮಿಸಬಹುದಾಗಿದೆ. ಇದು (ಪ್ರಜಾವಾಣಿ ದಿನಾಂಕ ೪ ಸೆಪ್ಟೆಂಬರ್, ೨೦೧೩, ಪು. ೬ ದಲಿತರೂ ಎಲ್ಲಿದ್ದರೋ ಅಲ್ಲಿಯೇ ಇದ್ದಾರೆ) ಇದೊಂದೇ ಲೇಳನವಲ್ಲ ಇಂತಹ ಎಷ್ಟೋ ಲೇಖನಗಳನ್ನು ನಾವು ಗಮನಿಸಬಹುದು. ಹಗೂ ನಮಗೆ ತಿಳಿಯದೆ ಇರುವಂತಹ ಹಲವು ಸಂಗತಿಗಳು ಇನ್ನೂ ಕ್ರೂರವಾದ ಸಮಾಜದ ವ್ಯವಸ್ಥೆಯನ್ನು ಲೇಖಕರ ಕಥೆಯಲ್ಲಿ ಕಾಣುತ್ತೇವೆ.

**'ಹಬ್ಬ'** ಕಥೆಯಲ್ಲಿ ಕಥೆಗಾರರು ಮೌಢ್ಯತೆಯ ಕವಲುಗಳು ಹೇಗೆ ಮುಗ್ಧಜನರನ್ನು ನಂಬಿಸುವ, ಹಿಂಸಿಸುವ ಪರಂಪರೆಯ ಗೊಡ್ಡು ಸಂಪ್ರದಾಯಗಳನ್ನು ಹಬ್ಬದ ಆಚರಣೆಯಲ್ಲಿ ಉಂಟಾಗುವ ಸನ್ನಿವೇಶಗಳ ಮೂಲಕ ನಿರೂಪಿಸಿದ್ದಾರೆ. ಗ್ರಾಮೀಣ ಬದುಕಿನಲ್ಲಿ ಅನಿಷ್ಟ ಪದ್ಧತಿಗಳು ಜನರ ಮನಸ್ಸಿನಲ್ಲಿ ಬೇರುಬಿಟ್ಟಿದೆ ಎಂಬುವುದನ್ನು ಕತೆಗಾರರು ವಿವರಿಸುತ್ತಾರೆ. ಹಬ್ಬದ ಆಚರಣೆಯ ಸಂದರ್ಭದಲ್ಲಿ ಊರಿನ ಹೆಂಗಸರು ದೇವರ ಗುಡಿಗೆ ಬರುವುದನ್ನು ಗೌಡರು ವಿರೋಧಿಸುತ್ತಾರೆ.

ಮಹಿಳೆಯರು ಸೂತಕದಲ್ಲಿದ್ದಾಗ, ದೇವರಗುಡಿಯನ್ನು ಪ್ರವೇಶಿಸುವುದು ತಲೆಮಾರಿನಿಂದಲೂ ನಡೆದುಕೊಂಡು ಬಂದ ಅನಿಷ್ಟ ಪದ್ಧತಿಯಾಗಿದೆ. ಈ ವಿಚಾರವಾಗಿ ಊರಿಗೆ ಧಣಿಗಳು ಮುಟ್ಟಾದ, ಹೆಂಗಸರನ್ನು ಊರಹೊರಗಿನ ಅವರ ತೋಟದಲ್ಲಿರಿಸುವ ಹೀನ ಪದ್ಧತಿಯಿಂದ ಸ್ತ್ರೀ ಶೋಷಣೆ ನಡೆಯುತ್ತದೆ. ದೇವರಿಗೆ ಸೂತಕದಿಂದ ಸಿಟ್ಟಾಗುತ್ತದೆಂದು ಆ ಜನರು ಅಂತರವನ್ನು ಕಾಯ್ದುಕೊಂಡು ನಿರ್ದಯವಾಗಿ ಹೊರಹಾಕುವುದನ್ನು ಗಮನಿಸಿದರೆ ಇವರ ಕುರುಡು ನಂಬಿಕೆಯಿಂದ ಮಹಿಳೆಯರು ನಲುಗುತ್ತಿರುವುದು ಕಂಡುಬರುತ್ತದೆ. ಇಂದೋ ನಾಳೆಯೋ ಸಾಯುವಂತಿದ್ದ ಅಜ್ಜಿಯಿಂದ ಎದುರಾಗುವ ಸೂತಕದಿಂದ ಹಬ್ಬವನ್ನೇ ನಿಲ್ಲಿಸಬೇಕಾಗುತ್ತದೆಂದು ಪಂಚಾಯಿತಿಯ ಜನ ತೀರ್ಮಾನ ಮಾಡುವುದು ಮೌಢ್ಯತೆಯ ಮತ್ತೊಂದು ಮುಖವಾಗಿದೆ. ಇವರು ಆಚರಿಸುವ

ರೀತಿನೀತಿಗಳನ್ನು ನೋಡಿದರೆ ಅಜ್ಞಾನದ ಛಾಯೆ ಹಳ್ಳಿ ಜನರಲ್ಲಿ ಸ್ಥಿರವಾಗಿ ಉಳಿದುಕೊಂಡಿರುವುದು ಕಂಡುಬರುತ್ತದೆ.

ಹರಕೆಯನ್ನು ಹೊತ್ತ ಮಹಿಳೆಯರು ಕವಟೆಗಳೆರಡಕ್ಕೂ ಉದ್ದವಾದ ದಬ್ಬಾಳವನ್ನು ಚುಚ್ಚಿಕೊಂಡು ಬಾಯಿಬೀಗ ಹಾಕಿಸಿಕೊಂಡು ಆಚರಣೆಯ ಗುಂಗಿನಲ್ಲಿ ಸಂಭ್ರಮಿಸುತ್ತಾರೆ. ಪುರಾತನ ಕಾಲದಿಂದಲೂ ನಡೆದುಬಂದ ಈ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿರುವ ಜನರ ಬುದ್ಧಿ ಮೌಢ್ಯತೆಗೆ ಹಿಡಿದ ಕನ್ನಡಿಯಂತಿದೆ. ಗ್ರಾಮೀಣ ಜನರು ಮೂಢನಂಬಿಕೆಗಳನ್ನು ಬಲವಾಗಿ ನಂಬಿದ್ದಾರೆ. ಇದು ಅವರ ಅವೈಜ್ಞಾನಿಕತೆಗೆ ಒಳಗಾಗಿ ಹೆಂಗಸರನ್ನು ಊರ ಹೊರಗಿಡುವ ಹೀನಾಸ್ಥಿತಿಯನ್ನು ಗಮನಿಸಿದರೆ ಗೊಡ್ಡು ಸಂಪ್ರದಾಯಗಳು ಅವರ ಬದುಕಿನ ಒಂದು ಭಾಗವಾಗಿ ಕಾಣುವುದನ್ನು ಕಥೆಗಾರರು ಚಿತ್ರಿಸಿದ್ದಾರೆ. ಕಥೆಗೆ ಪೂರಕವಾಗಿ ಗೀತಾ ನಾಗಭೂಷಣ ಅವರ ಅವ್ವ ಮತ್ತು ಜ್ವಲಂತ ಎಂಬ ಕಥಾಸಂಕಲನದಲ್ಲಿನ ಮೌಢ್ಯತೆಯನ್ನು ಸ್ಮರಿಸಿಕೊಳ್ಳಬಹುದು.

**'ಮಾನವ'** ಕಥೆಯಲ್ಲಿ ಮಾನವನ ಗುಣ ಪ್ರಾಣಿಗಳಿಗಿಂತ ಕಡೆ ಎಂಬುದನ್ನು ಕಾಣುತ್ತೇವೆ. ಹೇಗೆ ಸಮಾಜದಲ್ಲಿ ಕಂಡುಬರುತ್ತದೆ ಎಂಬುದನ್ನು ನಾವು ಕಾಣಬಹುದು. ಕಥೆಯ ಪ್ರಾರಂಭದಲ್ಲಿ "ಹೊರಗೆ ಧಾರಾಕಾರವಾಗಿ ಮಳೆಯಂತೆ ಬೇಸಿಗೆಯ ಈ ಬಿಸಿಲು ರೌದ್ರಾವದಿ ಉರಿಯುತ್ತ ನೆಲಕ್ಕಿಳಿಯುತ್ತಿದೆ. ಗಾಳಿ ತೆಪ್ಪಗೆ ಮಂದವಾಗಿ ಅಲ್ಲಲ್ಲೇ ಅಲುಗಾಡುತ್ತಿದೆ. ಬಟ್ಟೆಯಂತೆ ಎಲೆಗಳಿಂದ ಮೈಮುಚ್ಚಿಕೊಂಡಿದ್ದ ಮರಗಳು ಬೆತ್ತಲಾಗಿ ಯಾವುದಕ್ಕೂ ಅಂಜದೆ ಮಾಗುತ್ತಾ ಚಿಗುರು ಕಂಗಳ ತೆರೆಯುತ್ತಾ ನಾಳಿನ ಹೂಗಳ ಹಡೆಯುತ್ತಿವೆ. ಏನೆಲ್ಲವ ತುಂಬಿಕೊಳ್ಳುತ್ತಾ, ವಿಸ್ಮಯ ಮತ್ತು ವಿಪರ್ಯಾಸಗಳೆರಡನ್ನೂ ಜಗಿಯುತ್ತೇನೆ. ಮತ್ತೆ ಅದೇ ದಿನ ಅದೇ ಆ ಮೋಡದ ಸಂಜೆ ಮಾಗಿಯ ಮೊಗರು ಅದದೇ ಚಳಿ ಮಳೆ ಬಿಸಿಲುಗಳು ಬಂದು ಹಾಡಿ ಕುಣಿದು ನಲಿದು ನೆನಪ ಕೌದಿ ಹೊದಿಸಿ ಮಾಯವಾಗುತ್ತದೆ."[7] ಇಲ್ಲಿ ಮನುಷ್ಯನ ಕ್ರೂರ ವ್ಯಕ್ತಿತ್ವವನ್ನು ಹೇಳುವ ರೀತಿ ಕಥೆಯಲ್ಲಿ ಒಂದು ಹೆಣ್ಣನ್ನು ಬೆತ್ತಲೆಗೊಳಿಸುವುದು ಕಂಡುಬರುತ್ತದೆ. ಕಥೆಗಾರರು ತರುವ ವರ್ಣನೆಗಳು ಸಾಂದರ್ಭಿಕವಾದ ಧ್ವನಿಪೂರ್ಣತೆಯನ್ನು ಹೊಂದಿರುತ್ತವೆ. ವರ್ಣನೆಗಳು ಶುಷ್ಕವಾಗಿ ಬರುವುದಿಲ್ಲ. ಬದಲಾಗಿ ಜನಜೀವನದ ಬೇರುಗಳಿಗೆ ಹೊಂದಿಕೊಂಡಂತೆಯೇ ಬರುತ್ತವೆ. ಇವರ ಕೆಲವು ಕಥೆಗಳಲ್ಲಿ ಆರಂಭದ ಭಾಷೆಯೇ ಕಥೆಯ ತಿರುಳನ್ನು ಹೇಳುವಂತಹ ಮತ್ತು ಮುನ್ನಡೆಸುವಂತಹ ಕ್ರಮ ಕಂಡುಬರುತ್ತದೆ.

ಕಥೆಯಲ್ಲಿ ಬರುವ ವಿಭಿನ್ನ ವ್ಯವಸ್ಥೆಗಳು ಸಮಾಜಕ್ಕೆ ಹಾನಿಮಾಡುತ್ತವೆ. ಮನಷ್ಯತ್ವದಿಂದ ದೂರವಿರುತ್ತದೆ. ಇಲ್ಲಿ ಮಹಿಳಾ ಸಂಕಟ ವಿಶಿಷ್ಟವಾಗಿ ಕಿಚ್ಚನೆಯ ನೋವಾಗಿ ಕಾಣುತ್ತದೆ. ಅಂದರೆ ಒಂದು ಮುಖವಿಲ್ಲದೆ ಹಲವು ಮುಖದ ಜನರನ್ನು ಕಥೆಯಲ್ಲಿ ನೋಡಲಾಗುತ್ತದೆ. ಸನ್ನಿವೇಶವೆಂದರೆ "ಮೊನ್ನೆ ಮಣ್ಣಿನ ಬಣ್ಣದ ತೆಳುವಾದ ಒಬ್ಬ ಹುಡುಗಿ ನನ್ನನ್ನು ಹುಡುಕಿಕೊಂಡು ಬಂದಿದ್ದಳು. ಪರಿಚಯವಾಯಿತು. ದಿಟ್ಟೆಯಾಗಿಯೂ ಮುಗ್ಧಳಂತೆ ಕಂಡಳು. ಅವಳ ಪ್ರತಿಮಾತಿನಲ್ಲೂ ತಬ್ಬಲಿತನ, ವಿಷಾದ, ಏನನ್ನೋ ಕಳೆದುಕೊಂಡ ಭಾವನೆ ಕಾಣಿಸುತ್ತಿತ್ತು. ಏನೇನೋ ಮಾತಾಡಿದ ಮೇಲೆ ವಿಷಯ ತೆಗೆದಳು. ತನಗಾದ ಆಘಾತಗಳ ಬಗ್ಗೆ ನನ್ನಿಂದ ಕತೆ ಬರೆಸುವ ಉದ್ದೇಶ ಅವಳದಾಗಿತ್ತು. ನಿಮ್ಮ ಬಗ್ಗೆ ಕತೆ ಬರೆಯೋಕೆ ನನ್ನಲ್ಲಿ ಯಾವ ಭಾವನೆಗಳೂ ಈ ಕ್ಷಣಕ್ಕೆ ಸಾಧ್ಯವಾಗುತ್ತಿಲ್ಲ. ಅ ರೀತಿ ಕತೆ ಬರೆಯೋನು ನಾನಲ್ಲ ಎಂದೆ. ಇಬ್ಬರಲ್ಲೂ ಒಂದು ಕ್ಷಣ ವಿಚಿತ್ರಮೌನ ಏರ್ಪಟ್ಟಿತ್ತು.

ಕ್ಯಾಂಪಸ್ಸಿನ ಹೂ ಮರಗಳ ಕೆಳಗೆ ಮಬ್ಬುಗತ್ತಲಲ್ಲಿ ಕುಳಿತು ಬಿಕ್ಕತೊಡಗಿದಳು. ಇದೆನೋ ನನಗೆ ಗ್ರಹಚಾರ ಇದೆ ಎನಿಸಿ 'ಹೀಗೆ ಅಳಬೇಡಿ, ಅಳೋದನ್ನು ನಾನು ನೋಡಿದರೆ ತಲೆ ಕೆಡುತ್ತದೆ' ಎಂದೆ. ಅದು ಹಾಗಲ್ಲ, ನನ್ನನ್ನು ಅರ್ಥಮಾಡಿಕೊಳ್ಳಿ, ನನಗೆ ಈ ಭೂಮಿಯ ಮೇಲೆ ಇದ್ದವರು ಒಬ್ಬರೇ ಒಬ್ಬರು. ನನ್ನ ಅಪ್ಪ ಮೊನ್ನೆ ತೀರಿಕೊಂಡರು. ಈಗ ನನಗೆ ಯಾರು ಇಲ್ಲ ಎಂದು ಸಂಕಟಪಡುತ್ತಾಳೆ. ಅಂದರೆ ಆಕೆಯ ಮನಸಿಕ ವೇದನೆಯನ್ನು ಹೇಳತೊಡಗುವುದು, ಯಾರು ಕೇಳುವುದು ಇಲ್ಲವಲ್ಲ ಎಂಬ ಚಿಂತೆ ಇರುವುದು ಕೂಡ ಸತ್ಯವಾಗಿ ಆಕೆಗೆ ನೆಮ್ಮದಿ ಇಲ್ಲದಂತಾಗಿದೆ. ವಿಚಿತ್ರವೆಂದರೆ ಆಸ್ಪತ್ರೆಯ ನೂರಾರು ನಿಯಮಗಳಿಂದ ಆಕೆ ದಿಕ್ಕು ತಪ್ಪಿದಂತಾಗಿ ಈ ಹೆಣ ಸತ್ಯವಾಗಿಯೂ ತನ್ನ ತಂದೆಯದೇ ಹೆಣವನ್ನೂ ಕೊಡಿ, ನಾನು ಊರಿಗೆ ತಗೊಂಡೋಗಿ ಮಣ್ಣು ಮಾಡಬೇಕು ಎಂದು ಗೋಳಾಡುತ್ತಾಳೆ. ಸತ್ತ ದೇಹದ ಪ್ರತಿಯೊಂದು ಅಂಗಾಂಗಳನ್ನು ಕದಿಯುವ ಸಂಚಿರಬೇಕೆಂದು ಡಾಕ್ಟರುಗಳು ಹೆಣಕೊಡಲು ಒಪ್ಪಲಿಲ್ಲ.

ಈ ಹಿಂದೆ ಆಸ್ಪತ್ರೆಗೆ ತಂದೆಯನ್ನು ಆಕೆ ನೋಡಲು ಬಂದಿರಲೂ ಇಲ್ಲ. ಆಸ್ಪತ್ರೆಗೆ ದಾಖಲಾಗಿದ್ದದ್ದೂ ಆಕೆಗೆ ತಿಳಿದಿರಲಿಲ್ಲ. ಗೊಳೋ ಎಂದು ಅತ್ತು ಕರೆದರೆ ಪ್ರಯೋಜನವಿಲ್ಲ ಎನಿಸಿತು. ಕೊನೆಗೆ ಡಾಕ್ಟರು ಒಂದು ಮಾತು ಹೇಳಿದರು. "ನೋಡಮ್ಮ ನಿನಗೆ ಪರಿಚಯ ಇರೋ ಯಾರಾದರೂಒಬ್ಬರನ್ನು ಕರೆದುಕೊಂಡು ಬಂದು ಈ ಹೆಣವನ್ನು ನಿಮ್ಮ ತಂದೆ ಎಂದು ಹೇಳಿಸಿದರೆ ಆವಾಗ ನಿಮಗೆ ಹೆಣ ಕೊಡುತ್ತೇವೆ. ಈ ಘಟನೆ ಕಥೆಯಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಕಾಣುತ್ತದೆ. ನೆಲೆ ಇಲ್ಲದ ಜಾಗ, ಮನಸ್ಸಿನ ಖಿನ್ನತೆಯ ಬದುಕು

ಇವೆಲ್ಲ ಆಕೆಗೆ ಗೊಂದಲ ಗೊಂಡಿರುವ ಆಸ್ಪತ್ರೆಯ ವಿಚಿತ್ರ ರೋಗಿಯಂತೆ ಈಕೆನೆ ಕಾಣುವಾಗೆ ಗೋಚರಿಸುತ್ತದೆ ಎಂಬುವುದು ಸನ್ನಿವೇಶ ತಿಳಿಸುತ್ತದೆ. ಆದರೆ ಆಕೆಗೆ ಎಲ್ಲೋ ಒಂದು ಗಾಢವಾದ ನೋವು ಅಂತರಾಳದಲ್ಲಿ ಅಡಗಿಕೊಂಡಿದೆ. ಆಕೆ ಆಸ್ಪತ್ರೆಯ ಆಸುಪಾಸಿನಲ್ಲಿ ಊರ ಜನ ಯಾರಾದ್ರು ಕಾಣುತ್ತಾರ ಎಂದು ಹಪಹಪಿಸುತ್ತಾಳೆ. ಆ ಹುಡುಕಾಟದಲ್ಲಿ ಎಂದೋ ಪರಿಚಯವಾಗಿದ್ದ ದೊಡ್ಡ ಪ್ರೊಫೆಸರ್ ಕಾಣಿಸಿಕೊಳ್ಳುತ್ತಾರೆ. ಅವರು ಸಾಹಿತ್ಯದ ತಿರುಳನ್ನು ಬಲ್ಲೆನೆಂದು ತಿಳಿದಿದ್ದ ಅವರು ವಿಚಾರವಾದಿ ಎಂದೇ ಪ್ರಸಿದ್ಧವಾಗಿದ್ದರು. 'ಏನಮ್ಮಾ ಇಲ್ಲೀ' ಎಂದು ಪ್ರೀತಿಯಿಂದ ನೋಡಿದರು. ಕಣ್ಣೀರು ಹಾಕುತ್ತಾ ಆಕೆ ತನ್ನ ದೀನ ಸಂಗತಿಯನ್ನು ತಿಳಿಸುತ್ತಾಳೆ. ಪ್ರೊಫೆಸರ್‌ಗೆ ಇದು ಯಾವ ಕಷ್ಟವೂ ಅನಿಸದೆ ಇಷ್ಟೇನಾ, ನಾನಿದ್ದೀನಿ ಬಾರಮ್ಮ' ಎಂದು ಆಸ್ಪತ್ರೆಗೆ ಬಂದರು. ವಿಚಿತ್ರವೆಂದರೆ ಹೇಳಿ ಕಳಿಸಿದ್ದ ಡಾಕ್ಟರ್ ಸಾಹೇಬರಿಗೆ ಆ ವಿಚಾರವಾದಿ ಸಾಹಿತಿ ಸಾಹೇಬರು ತುಂಬ ಹತ್ತಿರದ ಗೆಳೆಯರಾಗಿದ್ದರು. ಆಗಾಗಿ ಕೆಲಸ ಸಲೀಸಾಗಿ ಆಗಿತ್ತು. ಬೆಳಿಗ್ಗೆ ಹೆಣವನ್ನು ತೆಗೆದುಕೊಂಡು ಹೋಗಬಹುದು ಎಂದು ಮಾತಾಯಿತು. ರಾತ್ರಿ ಹನ್ನೊಂದು ಗಂಟೆಯಾದರು, ಊರಿಗ ಹಿಂತಿರುಗುವ ಪ್ರಶ್ನೆ ಬರಲೇ ಇಲ್ಲ. ಸಾಹಿತಿ ಸಾಹೇಬರು ಒಂದು ತೀರ್ಮಾನಕ್ಕೆ ಬಂದರು. 'ನೋಡಮ್ಮಾ ಇಷ್ಟೊತ್ತಲ್ಲಿ ನಿನ್ನನ್ನು ಹೆಂಡತಿ ಮಕ್ಕಳಿರೋನನ್ನ ಮನೆಗೆ ಕರೆದುಕೊಂಡು ಹೋಗೋದು ಸರಿ ಕಾಣೋಲ್ಲ. ಒಂದು ಕೆಲಸ ಮಾಡೋಣ, ಈ ಹೋಟೆಲಲ್ಲೇ ಒಂದು ರೂಂ ಮಾಡೋಣ. ಹೇಗೋ ಇಲ್ಲೆ ಮಲಗಿದ್ದು ನೀನು "ಡೆಡ್ ಬಾಡಿ" ಜೊತೆ ಊರಿಗೆ ಹೋಗಬಹುದು. ಇಂತಹ ಹೊತ್ತಲ್ಲಿ ನಿನ್ನನ್ನು ಒಬ್ಬಳೇ ಬಿಟ್ಟು ಹೋಗೋದಕ್ಕೆ ನನ್ನಿಂದ ಆಗುತ್ತಿಲ್ಲ ಎಂದು ಗಿಣಿಗೆ ಹೇಳಿದಂತೆ ಹೇಳಿ ನಂಬಿಸಿ ಒಪ್ಪಿಸುತ್ತಾರೆ.

ಸಾಹಿತಿಯೊಬ್ಬ ವಿಚಿತ್ರವಾದ ರಸಿಕನಾಗಿರುತ್ತಾನೆ. ಆಕೆಯನ್ನು ಹಿಂಸೆಯಿಂದ ಒಪ್ಪಿಸಿಕೊಂಡು, ಮನುಷ್ಯನ ನೀಚತನಕ್ಕೆ ಮಾತ್ರ ಸಾವೇ ಇಲ್ಲ ಎನಿಸುವಾಗೆ ನಡೆದುಕೊಳ್ಳುತ್ತಾನೆ. ಹೆಣ ಬೇಕಿದ್ದರೆ ನನ್ನ ಜೊತೆ ಕೂಡು ಎಂಬುದಾಗಿ ವರಸೆಗಳಿಂದ ಆ ನಿಸ್ಪಾಪಿ ಹೆಣ್ಣು ಆ ರಾತ್ರಿ ಆನಂದಿಸುತ್ತಾರೆ. ಹೆಣದ ಜೊತೆ ಹೆಣವಾಗುವ ಪರಿಯನ್ನು ಆಕೆ ಕಲ್ಪಿಸಿರುತ್ತಾಳೆ. ಏನನ್ನೂ ಹೇಳಲಾರದ ಮಾಡಲಾರದ ಸ್ಥಿತಿ ಆಕೆಗೆ ಸಂಕಷ್ಟಕ್ಕೀಡಾಗಿದೆ. ಬೆಳಗಾಯಿತು ತಂದೆಯ ಶವದ ಜೊತೆ ಊರು ಮುಟ್ಟಿದಳು. ಅನೇಕ ಕಣ್ಣಿರುಗೆದು ಅವಳ ದುಃಖದ ಜೊತೆ ಕೈಗೂಡಿಸಿ ಕಾರ್ಯಮುಗಿಸಿದರು. ಊರಲ್ಲಿ ನಿಲ್ಲಲಾಗದೆ ಅದೇ ದಿನ ವಾಪಸ್ಸು ಬರುತ್ತಾಳೆ. ಸಾಹಿತಿ ಸಾಹೇಬರ ಬಗ್ಗೆ ಏನೇನೋ ಹೇಳತೊಡಗುತ್ತಾಳೆ. ನನ್ನಿಂದ

ಇದನ್ನೆಲ್ಲ ಕೇಳಿ ಸಹಿಸಿಕೊಳ್ಳಲು ಆಗೋದಿಲ್ಲ. ಸಾಕು ನಿಲ್ಲಿಸಿ ಎಂದೆ ತೆಪ್ಪಗೆ ಕುಳಿತು ಕತ್ತಲೆಯ ಆಕಾಶದ ಕಡೆ ನಕ್ಷತ್ರಗಳನ್ನು ನೋಡುತ್ತಿದ್ದಳು.

ಲೇಖಕರ ಮಾತು ಇದನ್ನೆಲ್ಲ ಬರೆಯೋ ವೇಳೆಗೆ ನನ್ನ ಜೀವ ನಡುಗಿ ಹೋಗಿತ್ತು. ಇದು ಕತೆಯನ್ನು ಮೀರಿದ್ದು ನನ್ನಿಂದ ಬರೆಯೋಕೆ ಆಗೊಲ್ಲ ಎಂದೆ. ಮೌನವಾಗಿದ್ದಳು. ರಸ್ತೆಯುದ್ದಕ್ಕೂ ಅದೇ ಹಳದಿ ಹೂಗಳು ಉದುರುತ್ತಿದ್ದವು. ಮರಗಳ ರಾತ್ರಿಯ ತಂಪು ನಮ್ಮ ಮಧ್ಯೆ ಸುಳಿದಾಡುತ್ತಿತ್ತು. ಮಕ್ಕಳನ್ನು ಕೈಹಿಡಿದು ಎತ್ತಿನಿಲ್ಲಿಸುವಂತೆ ಮೇಲಕ್ಕೇಳಿಸಿದೆ. ದಿಟ್ಟಿಸಿ ನೋಡುತ್ತಾ, ನೀವು ನನಗೆ ಏನೂ ಮಾಡೋದಿಲ್ಲ ತಾನೆ, ನನಗೆ ಹೆದರಿಕೆಯಾಗುತ್ತಿದೆ ಎಂದು ತಡವರಿಸಿದಳು. ಆ ತನಕ ತಡೆದುಕೊಂಡಿದ್ದ ಸಂಕಟವೆಲ್ಲ ಉಮ್ಮಳಿಸಿ ಆಹಾ ಜೀವವೇ ಲೋಕವೇ ನೀನೆಷ್ಟುಕ್ರೂರಿ ಎನಿಸಿ ಆಕೆಗೆ ಏನನ್ನೂ ಹೇಳಲಾರದೆ ಮಾನವರ ನಡತೆಯ ಬಗ್ಗೆ ದಂಗಾದೆ ಎಂದು ಲೇಖಕರ ಮನ ಕರಗಿ ಕ್ರೂರವಾದ ಜನರ ಬಗ್ಗೆ ಕೋಪಗೊಂಡು, ಬಹಳ ನೋವಿನಿಂದ ಈ ಕಥೆಗೆ ರೂಪನೆ ಕೊಡುತ್ತಾರೆ.

ಕಥೆಯಲ್ಲಿ ಹಲವಾರು ಮುಖಭಾವಗಳನ್ನು ತಿಳಿಯಲಾಗುತ್ತದೆ. ಇಲ್ಲಿ ಒಬ್ಬ ಸಾಹಿತಿ ಮಾಡಿದ ತಪ್ಪನ್ನು ಇಡೀ ಆಕೆ ಜೀವನ್ಪರಿಯಂತ ನೋವನ್ನು ಅನುಭವಿಸುವಾಗ ಆಯಿತು. ಅದಲ್ಲದೆ ಆಸ್ಪತ್ರೆಯ ಡಾಕ್ಟರ್‌ಗಳ ಅಪನಂಬಿಕೆಯಿಂದ ತಂದೆ ಕಳೆದುಕೊಂಡ ತಬ್ಬಲಿಯಾದ ಆ ಹೆಣ್ಣಿಗೆ ಅನ್ಯಾಯವಾಗಿರುವುದನ್ನು ಮೊಗಳ್ಳಿ ಅವರು ಮಾನವನ ವಿಭಿನ್ನ ನೆಲೆಗಳ ಮುಖಾಂತರ ಗುಣ, ನಡತೆಯನ್ನು ಸ್ಪಷ್ಟಪಡಿಸುತ್ತಾರೆ. ಹಾಗೆ ಸಮಾಜಕ್ಕೆ ವಂಚಕರನ್ನು ಮುಖಾಮುಖಿ ಮಾಡುವ ನಿಟ್ಟಿನಲ್ಲಿ "ಮಾನವ" ಕಥೆಯನ್ನು ಸಮಾಜದ ಹಿತದೃಷ್ಟಿಗೆ ನಯವಂಚಕರಿಂದ ನೋವುಂಡ ಹೆಣ್ಣಿನ ಕತೆಯನ್ನು ಅಭಿವ್ಯಕ್ತಿಸುತ್ತಾರೆ.

**'ಕೆರೆಕೆಂಪವ್ವ'** ಕಥೆಯಲ್ಲಿ ಕೆಂಪವ್ವನನ್ನು ಊರಿನ ಉಳಿಯುವಿಕೆಗಾಗಿ ಬಲಿಕೊಡುವುದರ ಮೂಲಕ ಕಥೆಯ ತಿರುಳು ತೆರೆದುಕೊಳ್ಳುತ್ತದೆ. ಗ್ರಾಮದ ಗೌಡನು "ಊರು ಉಳಿಬೇಕಾಂದ್ರೆ ಅವಳು ಕೆರೆಗೆ ಮುಳುಗಲೇ ಬೇಕು, ದೈವದ ಮಾತಿಗೆ ತಲೆ ಬಾಗದವರು ನನ್ನೂರಲ್ಲಿ ಬದುಕುಳಿಯುವಂತಿಲ್ಲ"[೩೩] ಎಂದು ಆದೇಶ ಹೊರಡಿಸುವುದು ಮೌಢ್ಯದ ಸಂಕೇತವಾಗಿದೆ. ಈ ಮಾತಿಗೆ ಊರಿನ ಇನ್ನಿತರರು ದನಿಗೂಡಿಸಿದರು, ಧಾರಾಕಾರವಾಗಿ ಸುರಿಯುತ್ತಿರುವ ಮಳೆಯನ್ನು ನಿಲ್ಲಿಸುವುದಕ್ಕಾಗಿ ಬಲಿಕೊಡಬೇಕೆಂಬ ಇವರ ಅಂಧಾನುಚರಣೆ ಅವೈಜ್ಞಾನಿಕ-ವಾದುದಾಗಿದೆ. ಋತುಗಳ ಅನ್ವಯದ ಪ್ರಕಾರ ಕಾಲಕಾಲಕ್ಕೆ ಮಳೆಯಾಗುವುದು ನಿಸರ್ಗದ ನಿಯಮ, ಆದರೆ ಮಳೆಯನ್ನು ನಿಲ್ಲಿಸುವುದಕ್ಕೂ ಕೆಂಪಿಯ ಬಲಿಕೊಡುವುದಕ್ಕೂ ಏನೇನು ಸಂಬಂಧ ಇಲ್ಲ ಎಂಬ ಕನಿಷ್ಟ ಪ್ರಜ್ಞೆ ಈ ಜನರಿಗಿಲ್ಲ. ಮೇಲಿನ ಅಂಶಗಳು ಗ್ರಾಮ ಸೊಗಡಿನ

ಜನರ ಕುರುಡು ನಂಬಿಕೆಯನ್ನು ಎತ್ತಿತೋರಿಸುತ್ತದೆ. ಕೆಂಪವ್ವನನ್ನು ಬಲಿಕೊಡಲು ಊರಿನ ಗೌಡ ಈಕೆ ಹೆಸರನ್ನು ಸೂಚಿಸುತ್ತಾನೆ.

ನಿಷ್ಪಾಪಿಯಾದ ಇವಳು ಬಲಿಗೆ ಒಳಗಾಗುವ ಸಂದರ್ಭ ಕರುಳು ಮಿಡಿಯುವಂತೆ ಮಾಡುತ್ತದೆ. ಇದಕ್ಕಾಗಿ ಊರ ಮೆರವಣಿಗೆ ಮಾಡುವ ಮುಖಾಂತರ ಕೆಂಪವ್ವನ ಕರೆತಂದು ಬಲಿಕೊಡುವ ಘಟನೆಯನ್ನು ಕತೆಗಾರರು ಮನಮಿಡಿಯುವಂತೆ ಚಿತ್ರಿಸಿದ್ದಾರೆ. ಈ ಪ್ರಸಂಗಕ್ಕೆ ಪೂರಕವಾಗಿ ತಿ.ನಂ.ಶ್ರೀ. ಅವರು ರಚಿಸಿರುವ 'ಕೆರೆಗೆಹಾರ' ಎಂಬ ಕವಿತೆಯಲ್ಲಿ ಕೆರೆಯಲ್ಲಿ ನೀರಿಲ್ಲ ಎನ್ನುವ ವಿಚಾರಕ್ಕಾಗಿ ಜೋಯಿಸರ ಪ್ರಕಾರ ಭಾಗೀರಥಿಯನ್ನು ಬಲಿಕೊಡಬೇಕೆಂದು ಹೇಳುವುದನ್ನು ಸ್ಮರಿಸಿಕೊಳ್ಳಬಹುದು. ಗ್ರಾಮೀಣ ಜನರು ಮೌಢ್ಯತೆಯ ಭಯದ ವಾತಾವರಣದಲ್ಲಿ ಸ್ತ್ರೀ ಬಲಿಕೊಡುವ ಮುಖೇನ ಮಳೆ ನಿಲ್ಲುತ್ತದೆ ಎಂಬ ಆಶಾವಾದಿತನವನ್ನು ಗಮನಿಸಬೇಕು.

ಕೆರೆಕೆಂಪವ್ವನನ್ನು ಕರೆತಂದು, ಶಾಸ್ತ್ರ ಸಂಪ್ರದಾಯಗಳ ಮೂಲಕ ಅವಳನ್ನು ಕೆರೆಗೆ ಬಲಿಕೊಡುತ್ತಾರೆ. ಇದರಿಂದಾಗಿ ಮಳೆ ನಿಂತು ಹೋಗುತ್ತದೆ ಎಂಬ ಸಂಭ್ರಮದಲ್ಲಿ ಮುಳುಗಿರುವ ಜನರ ಕುರುಡುತನವನ್ನು ಕಥೆಗಾರರು ಕೆಂಪವ್ವನ ಪಾತ್ರದ ಮೂಲಕ ನಿರೂಪಿಸಿದ್ದಾರೆ. ಕಥೆಯಲ್ಲಿ ಕೆರೆಕೆಂಪವ್ವ ಮತ್ತು ಭಾಗೀರಥಿಯರ ಬದುಕಿನ ಸ್ಥಿತಿಗಳನ್ನು ಮುಖಾಮುಖಿ ಮಾಡುವುದನ್ನು ಸೂಚಿಸಬಹುದಾಗಿದೆ.

### ೧.೪. ಮಕ್ಕಳು ಮತ್ತು ಮೂಕ ಪ್ರಾಣಿಗಳು

ಗ್ರಾಮೀಣ ಸಮಾಜದಲ್ಲಿ ದಲಿತಕೇರಿಯ ಮಕ್ಕಳು ಹಿರಿಯರ ಕೋಪಕ್ಕೆ ತುತ್ತಾಗಿ ನಲುಗುವಂತ ಶೋಚನೆಯ ಸ್ಥಿತಿಯನ್ನು ಕಥೆಗಾರರು ಚಿತ್ರಿಸಿದ್ದಾರೆ. ಮಕ್ಕಳೆಂದರೆ ದೇವರು ಎಂದು ದೊಡ್ಡವರು ಕರೆದಿರುವುದು ಸೂಕ್ತವಾಗಿದ್ದರು ಕೂಡ, ಹಳ್ಳಿ ಜನರ ಮಕ್ಕಳು ಒಂದು ರೀತಿಯ ಪ್ರಾಣಿಗಳ ಗುಂಪಿಗೆ ಸೇರಿದವಂತೆ ಭಯಭೀತರಾಗಿ ಸ್ವತಂತ್ರವಿಲ್ಲದೆ ಪರಿತಪಿಸುವುದನ್ನು ಕಾಣುತ್ತೇವೆ. ಮನುಷ್ಯರನ್ನೆ ನಂಬಿಕೊಂಡು ಬದುಕುವ ನಿಯತ್ತಿಗೆ ಹೆಸರಾದ 'ನಾಯಿ'ಗಳು ಕೂಡ ಹಸಿವಿನ ಒಡೆತಕ್ಕೆ ಈಡಾಗುವುದನ್ನು ನೋಡುತ್ತೇವೆ. ಮಾನವರಂತೆ ಪ್ರಾಣಿಗಳು ಕೂಡ ಭಾವನಾ ಜೀವಿಯಾಗಿರುವುದನ್ನು ಗಮನಿಸಿದರೆ, ಕಥೆಗಾರರು ಸಾಕುಪ್ರಾಣಿಗಳ ಮನಃಸ್ಥಿತಿಯನ್ನು ಅರಿತು ತಮ್ಮ ಕಥೆಗಳಲ್ಲಿ ಅದನ್ನು ಅಭಿವ್ಯಕ್ತಿಸಿದ್ದಾರೆ. ಮಕ್ಕಳು ಮತ್ತು ಪ್ರಾಣಿಗಳು ಮಾನಸಿಕವಾಗಿ ದೈಹಿಕವಾಗಿ ಹಿಂಸೆಗೆ ಗುರಿಯಾಗುವುದನ್ನು ಕಥೆಗಾರರು ತಮ್ಮ ಕಥೆಗಳಲ್ಲಿ ಅನಾವರಣ ಮಾಡಿದ್ದಾರೆ.

**'ಒಂದು ಹಳೇ ಚಡ್ಡಿ'** ಕಥೆಯಲ್ಲಿ 'ಸೀನಿ'ಗೆ ಚಡ್ಡಿ ಹಾಕಲಿಲ್ವಲ್ಲ ಎಂಬ ಕಾರಣದಿಂದ ಕಥೆಯ ಒಳತಿರುಳು ತೆರೆದುಕೊಳ್ಳುತ್ತದೆ. 'ಚಡ್ಡಿ'ಯ ವಿಚಾರಕ್ಕೆ ನಾಗರಾಜನ ಕುಟುಂಬದಲ್ಲಿ ಅಶಾಂತಿ, ಕಲಹ ಉಂಟಾಗುವುದನ್ನು ಕಾಣುತ್ತೇವೆ. ಆತನು ತನ್ನ ಮಗನಿಗೆ ಚಡ್ಡಿಯನ್ನು ಹಾಕಬೇಕೆಂಬ ಹಠ ಹಿಡಿದು ರಂಪ ಮಾಡುತ್ತಾನೆ. ಆ ಮದುವೆ ಮನೆಯಲ್ಲಿ 'ಸೀನಿ'ಯು ಚಡ್ಡಿ ಹಾಕಿಲ್ವಲ್ಲ ಎಂಬ ಸಿಟ್ಟಿನಲ್ಲಿ ಆ ಮಗುವಿಗ ಬಡಿಯುತ್ತಿರುವುದರಿಂದ, ಹುಡುಗನಿಗೆ ಭಯದ ವಾತಾವರಣ ಉಂಟಾಗುತ್ತದೆ.

"ಸೀನಿ"ಯ ಅಳುವಿನೊಂದಿಗೆ ಅವನ ಅಜ್ಜಿ ನಾಲ್ಕಾಣೆ ಬಂದವನನ್ನು ಕೊಟ್ಟು ತಿಂಡಿ ತಿನ್ನೋಗು ಎಂದು ಕಳಿಸುತ್ತಾಳೆ. ಆದರೆ ನಾಗರಾಜನ ಭಯಕ್ಕೆ ಒಳಗಾಗಿ 'ಸೀನಿ'ಯು ತನ್ನ ಅಜ್ಜಿ ಕೊಟ್ಟ ಕಾಸು ಬೇಕಿರಲಿಲ್ಲ. ಆತನಿಗೆ ಭಯ ಹಾಗೂ ಹೊಡೆತಗಳ ಹಿಂಸೆಯಿಂದ ಮುಕ್ತನಾಗಬೇಕಿತ್ತು. ಅಜ್ಜಿ ಕೊಟ್ಟ ನಾಲ್ಕಾಣೆಯನ್ನು ತೆಗೆದುಕೊಂಡು ಅಂಗಡಿಯ ಕಡೆ ನಡೆಯುತ್ತಾನೆ. ಇತ್ತ ನಾಗರಾಜ ಬೀಡಿಯನ್ನು ಹಚ್ಚಿ ಕುಳಿತ್ತಿದ್ದಾಗ ಯಾರೋ ನಡುಗುವ ಸ್ವರದಲ್ಲಿ ಓಡಿಬಂದು "ನಿಮ್ಮ ಸೀನಿ, ಸರ್ಕಲ್ ತಾವ್ ಲಾರಿಗೆ ಸಿಕ್ಕೋಗೊನೆ ಬನ್ರಪೋ"[೩೪] ಎಂದು ಗೋಳಿನ ಸ್ವರದಲ್ಲಿ ಹೇಳಿದ.

ಇದನ್ನು ಗಮನಿಸಿದ ಸೀನಿಯ ತಂದೆ ಅಯ್ಯೋ ಎಂದು ದೇಹವೇ ನಜ್ಜಿ ಹೋದಾಂತೆ ಓಡಿ ಬಂದ. ಮಗನ ಜಜ್ಜಿ ಹೋದ ಅರ್ಧ ದೇಹವನ್ನು ನೋಡಿ ಮೂರ್ಛೆ ಹೋಗಿ "ಅಯ್ಯೋ ಮಗನೆ ಎಂಥಾ ಸಾವು ಬಂತಪ್ಪಾ"[೩೫] ಎಂದು ರಕ್ತಸಿಕ್ತವಾದ ದೇಹವನ್ನು ಬಾಚಿಕೊಳ್ಳಲು ಹೋಗುತ್ತಾನೆ. ಅಷ್ಟರಲ್ಲಿ ಅಜ್ಜಿಯು ಪಾಪಾಭೀತಳಾಗಿ ತಿಂಡಿ ತಿನ್ನೋಕೆ ನಾಲ್ಕಾಣೆ ಕೊಟ್ಟಿದ್ದರಿಂದ "ಅಯ್ಯೋ ಕಂದಾ"[೩೬] ಸೀನಿ ಎಂದು ಅವನ ಮುಖದ ಮೇಲೆ ಬಿದ್ದುಗೋಳಾಡುತ್ತಾಳೆ. ಇದು ಮಕ್ಕಳ ಮೇಲೆ ಹಲ್ಲೆ ನಡೆಸಿದರೆ ಅದರಿಂದ ಉಂಟಾಗುವ ಭೀಕರ ಪರಿಣಾಮವನ್ನು ಸ್ಪಷ್ಟಪಡಿಸುತ್ತದೆ.

ಜವಾಬ್ದಾರಿ ಇಲ್ಲ ತಂದೆಗೆ, ಜವಾಬ್ದಾರಿ ಅರಿತ ತಾಯಿ ಆದರೂ ಸಮಾಧಾನಪಡಿಸುತ್ತಾ ಮಗುವಿನ ನಿರ್ವಹಣೆಯನ್ನು ಮಾಡುತ್ತಿದ್ದಳು. ಸೀನಿಯು ಭಯದ ವಾತಾವರಣಕ್ಕೆ ಸಿಲುಕಿ ಆತಂಕದಿಂದ ಹೊರಬರಲು, ಅಂಗಡಿಗೆ ಹೋಗಿದ್ದ ಮಗು, ತನ್ನ ಸಾವಿಗೆ ಭಯವೇ ಪ್ರಮುಖ ಕಾರಣ ಎಂಬ ಅಂಶ ಗಮನಾರ್ಹವಾದುದು. ಇಡೀ ಮದುವೆಯ ಮನೆಯವರಿಗೆ 'ಸೀನಿ' ಸಾವಿನ ವಿಚಾರ ತಿಳಿಸುವ ಮುಖಾಂತರ ಕಥೆ ಮುಕ್ತಾಯವಾಗುತ್ತದೆ.

ಏನೂ ಅರಿಯದ ಮಗುವಿನ ದುರಂತದೊಂದಿಗೆ ಲೇಖಕರು ದಲಿತರ ಬದುಕಿನ ಚಿತ್ರಣವನ್ನು ಅನಾವರಣಗೊಳಿಸುತ್ತಾರೆ. ಬದುಕಿನಲ್ಲಿ ಹಣ, ಹೆಂಡ, ಹೆಂಡತಿಯರು, ಮಕ್ಕಳು ಇವರಲ್ಲಿ ಯಾರು ಮುಖ್ಯವಾದವರು ಎಂಬ ಪ್ರಮುಖ ಪ್ರಶ್ನೆಯೊಡನೆ ಕಥೆ ಮುಕ್ತಾಯವಾಗುತ್ತದೆ. ಮಾತ್ರವಲ್ಲದೆ ಅನೇಕ ಪ್ರಶ್ನೆಗಳನ್ನು ಓದುಗರಿಗೆ ಮುಂದಿಡುತ್ತದೆ.

**'ಅಲ್ಲಿ ಆ ಆಳು ಈಗಲೂ'** ಕಥೆಯಲ್ಲಿ 'ಹೂವ' ಎಂಬ ಹುಡುಗನ ಪಾತ್ರ ಇಡೀ ಕಥೆಯ ಕೇಂದ್ರಬಿಂದುವಾಗಿದೆ. ಹಠಮಾರಿತನದಿಂದ ಯಾವುದೋ ಕಾರಣಕ್ಕಾಗಿ ಅವನು ರೋಧಿಸುತ್ತಿದ್ದರೆ, ಅದನ್ನು ಗ್ರಹಿಸಿದೆ ಎಲ್ಲರೂ ದೇವರು ಮತ್ತು ದೆವ್ವದ ಪರಿಕಲ್ಪನೆಯಿಂದ ಮಗುವಿಗೆ ಹಿಂಸಿಸುವುದನ್ನು ಕಾಣುತ್ತೇವೆ. ಮಕ್ಕಳೆಂಬ ಅಂತಃಕರಣದ ನಿವೇದನೆ ಇಲ್ಲದ ಈ ಸಮುದಾಯದಲ್ಲಿ ಏನು ಅರಿಯದ 'ಹೂವ'ನ ಮೇಲೆ ಅನುಮಾನದ ಪರಿಸರ ಸೃಷ್ಟಿಸಿ ಆ ಮಗುವಿನ ಮೇಲೆ ದುಷ್ಪಾರಿಣಾಮ ಉಂಟಾಗಲು ಕಾರಣವಾಗುತ್ತದೆ.

ಇಲ್ಲಿ 'ಹೂವ'ನ ಮನಸ್ಸಿನ ಮೇಲೆ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಮಾನಸಿಕ ಹಿಂಸೆ ಉಂಟು ಮಾಡುವುದನ್ನು ಕಾಣಬಹುದು. ಕಥೆಯಲ್ಲಿ ಲೇಖಕರು ಮಗುವಿನ ಪಾತ್ರದೊಡನೆ ದಲಿತ ಸಮಾಜದ ಅಜ್ಞಾನವನ್ನು ಚಿತ್ರಿಸುತ್ತಾ, ಅವರ ಆಂತರ್ಯದಲ್ಲಿ ಮಕ್ಕಳ ಬಗ್ಗೆ ಅಪಾರವಾದ ಕಾಳಜಿಯು ಇರುವುದನ್ನು ಕಥೆ ಸ್ಪಷ್ಟಪಡಿಸುತ್ತದೆ. ಹೀಗೆ 'ಹೂವ'ನ ತಂದೆತಾಯಿಯವರಿಗೆ ಮಗನೆಂಬ ಜವಾಬ್ದಾರಿ ಇಲ್ಲದಿರುವುದನ್ನು ಗಮನಿಸಿದರೆ ಭವಿಷ್ಯದ ಬಗ್ಗೆ ಆತಂಕ ಸೃಷ್ಟಿಯಾಗುತ್ತದೆ.

**'ಬುಗುರಿ'** ಕಥೆಯಲ್ಲಿ 'ಚಲುವ'ನ ಬುಗುರಿ ಕಕ್ಕಸು ಗುಂಡಿಗೆ ಬಿದ್ದಿರುವುದು ಒಂದು ಸಣ್ಣ ಸಂಗತಿ ಎನ್ನಿಸುತ್ತದೆ. ಬುಗುರಿಯು ಚಲುವನ ಚಟುವಟಿಕೆ ಲವಲವಿಕೆಯ, ಆಸಕ್ತಿಯ ಸಂಕೇತವಾಗಿ ಗುರುತಿಸಬಹುದು. ಈತನ ಬುಗುರಿಯು ಕಕ್ಕಸುಗುಂಡಿಗೆ ಬಿದ್ದು ಹೋದದ್ದೆ ಎಲ್ಲ ಅನಾವುತಗಳಿಗೆ ಕಾರಣವಾಗುತ್ತದೆ. ಇದನ್ನು ಅರಿತ ಚಲುವನ ತಂದೆಯು ಬುಗುರಿಯನ್ನು ಬಿಸಾಡುತ್ತಾನೆ. ಎಲ್ಲವನ್ನು ತಿಳಿದವರು ಒಂದು ಚಿಕ್ಕ ಸಂಗತಿಗಳು ಮಕ್ಕಳ ಮೇಲೆ ದುಷ್ಪರಿಣಾಮ ಬೀರುತ್ತದೆ ಎಂಬುವುದನ್ನು ಕಥೆ ಚಿತ್ರಿಸುತ್ತದೆ. ಮಕ್ಕಳಿಗೆ ಮನೋವೈಜ್ಞಾನಿಕವಾಗಿ ಬುದ್ಧಿ ಶಕ್ತಿ ಕಡಿಮೆ ಇರುತ್ತದೆ. ಹಿರಿಯನಾದ ಈತನ ತಂದೆ ಚಿಕ್ಕಣ್ಣ, ಮಗನ ಮೇಲೆ ದರ್ಪವನ್ನು ತೋರಿಸುವುದು ಅವಿವೇಕತನದ ಸಂಗತಿಯಾಗಿದೆ.

**'ಪ್ರಾಣಿಗಳು'** ಕಥೆಯಲ್ಲಿ 'ಊರಿನ ತುಂಬ ಉಸಿರು ಕಟ್ಟಿಸುವ ಧೂಳು ತುಂಬಿಕೊಂಡು; ಆ ಧೂಳೇ ಅವರ ಗೆಳೆಯನಂತಾಗಿ ಇಡೀ ಊರು ಕೇರಿ ಅಸಾಧ್ಯ ಕಸ, ಕಮಟು ವಾಸನೆ, ಚಿಂದಿಚೂರುಗಳಿಂದ ವಿವರ್ಣಗೊಂಡಿತ್ತು' ಎಂದು ಪ್ರಾರಂಭಿಸಿ ಕಥೆಯಲ್ಲಿ ಒಂದು ಕ್ಷುಲ್ಲಕ

ಕಾರಣ ಇಡೀ ದಲಿತ ಕೇರಿಯ ಸಮಸ್ಯೆಯಾಗುವ ಆ ಮೂಲಕ ಬದುಕಿನ ಕ್ರೂರಗತಿಯನ್ನು ನಿರ್ಧರಿಸಿರುವ ತಾಣವಾಗುತ್ತದೆ. ಗುಂಡೇಗೌಡನು ತನಗಾದ ಸಣ್ಣ ಅಪಮಾನಕ್ಕೆ ಊರಿನ ದಲಿತರನ್ನು ಗುರಿಮಾಡಿ ಅವರ ಮೇಲೆ ದೌರ್ಜನ್ಯ ನಡೆಸುವ ಪರಿಯನ್ನು ಕಾಣಬಹುದು. ಅಲ್ಲದೆ ಅದೇ ಜಾತಿಯವನಾದ ವೆಂಕಟೇಗೌಡನ ಕೈವಾಡವಿದೆ ಎಂತಲೂ; ಕಾರಣ ಇವನ ರಾಜಕೀಯ ಎದುರಾಳಿ ವೆಂಕಟೇಗೌಡ ಚುನಾವಣೆಯಲ್ಲಿ ಗೆದ್ದಿರುತ್ತಾನೆ. ಈ ಗುಂಡೇಗೌಡರು ಸೈಕಲ್‌ನಿಂದ ತಿಪ್ಪೆಗೆ ಬಿದ್ದು, ಅದು ವಿವಿಧ ಆಯಾಮಗಳನ್ನು ಪಡೆಯುತ್ತಾ ಅಸಹಾಯಕರಾದ ದಲಿತರ ಮೇಲೆ ಪರಿಣಾಮ ಬೀರುತ್ತದೆ. ತನ್ನ ಜಮೀನಿನಿಂದ ನೀರು ತರುವುದನ್ನು ನಿಲ್ಲಿಸುತ್ತಾನೆ. ಇದರಿಂದ ಕಂಗಾಲಾದ ದಲಿತರ ಈ ಕೃತ್ಯಕ್ಕೆ ಎಲ್ಲರನ್ನು ಶಪಿಸುತ್ತಾರೆ. ಲೇಖಕರು ಈ ಕಥೆಯಲ್ಲಿ ಒಂದು ಸಣ್ಣ ಎಳೆಯನ್ನು ಇಟ್ಟುಕೊಂಡು ದಲಿತರ ಅಸಹಾಯಕತೆ, ಸಿಟ್ಟು, ನೋವು ಶೋಷಣೆ, ಇವು ಹೇಗೆ ಅವರ ಬಾಳಿನಲ್ಲಿ ಬಂದು ಅವರ ಬದುಕು ನೋವಿನ ಒಡಲಲ್ಲಿ ಬೇಯುವಂತೆ ಮಾಡುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ.

ಕಥೆಯಲ್ಲಿ ವಿಶೇಷವಾದ ಸಂದರ್ಭವೆಂದರೆ ಕತ್ತೆಗಳ ಪ್ರಸಂಗವಾಗಿರುತ್ತದೆ. ಸಾರಾಗ ಸರಾಗ ಸಾಗಿಸುತ್ತಿರುವಾಗ, ಆ ಕತ್ತೆಗಳು ಸೊಂಟದಲ್ಲಿ ಟಿನ್ನು ಹೊತ್ತುಕೊಂಡು ಎಲ್ಲೆಲ್ಲೋ ಎಷ್ಟೋ ದೂರ ಓಡಾಡಿ ಹೆದರಿ ಸುಸ್ತಾಗಿ ಬೇಸತ್ತು ಇನ್ನು ಯಾವ ದಾರಿಯೂ ಕಾಣದೆ ವಾಪಸ್ಸು ಮನೆ ಸೇರುವುದೇ ಸರಿ ಎಂಬ ಇಚ್ಛೆಯಲ್ಲಿ ಹಿಂತಿರುಗಿ ಬರುತ್ತಿದ್ದವು. ಟಿನ್ನುಗಳಿನ್ನೂ ಸೊಂಟದಿಂದ ಕಳಚಿಕೊಂಡೇ ಇರಲಿಲ್ಲ. ಆ ಶಬ್ದ ಅವುಗಳ ಬೆಂಬತ್ತಿದ್ದರಿಂದ ಅವು ಕೊನೆಗೆ ಹೊಂದಿಕೊಂಡು, ಹಾಗೂ ಅನುಮಾನದಿಂದ ನರಳುತ್ತಾ, ಈ ಊರಿನವರು ನಮ್ಮ ಸೊಂಟಕ್ಕೆ ಅದಾವ ಭೀತಿಯನ್ನೂ, ಭಾದೆಯನ್ನೂ, ವಿಧಿಯನ್ನು ಕಟ್ಟಿದ್ದಾರೋ ಎಂಬ ದುಃಖದಲ್ಲಿ ಯೋಚಿಸುತ್ತಾ ಕೊನೆಗೆ, 'ಶಬ್ದಕ್ಕಂಜಿದೊಡೆಂತಯ್ಯ' ಎಂಬಂತೆ ಅವು ಮತ್ತೆ ಆ ಮನುಷ್ಯರನ್ನೇ ಕೂಡಿಕೊಳ್ಳಲು ಬಂದವುಗಳಾಗಿವೆ.

ಪ್ರಾಣಿಗಳಿಗೂ ಮನುಷ್ಯನಂತೆ ಭಾವನೆಗಳು ಇವೆ ಎನ್ನುವುದು ಕಥೆಯ ಈ ಮೇಲಿನ ಪ್ರಸಂಗದಲ್ಲಿ ಗೋಚರವಾಗುತ್ತದೆ. ಹಾಗೆ ಕತ್ತೆಗಳಿಗೆ ಮನುಷ್ಯರಂತೆ ಭಾವನಾತ್ಮಕ ಜೀವ ತುಂಬಿರುವ ಲೇಖಕರ ತಂತ್ರಗಾರಿಕೆ ವಿಶಿಷ್ಟವಾದದ್ದು. ವಿಶೇಷವೆಂದರೆ ಆ ಜನ ಈಗ ಸೇರಿದ್ದ ಸರ್ಕಲ್ ಬಳಿಯೇ ಹಾಯ್ದು ಆಗಸನ ಮನೆ ತಲುಪಬೇಕಾದ ಅನಿವಾರ್ಯತೆ ಇರುತ್ತದೆ. ಬೇರೆ ಹಾದಿಯಿಂದ ಬರಲು ದಾರಿಯಿರುವುದಿಲ್ಲ. ಕತ್ತೆಗಳು ಜನರ ಆ ಗದ್ದಲ, ಗುಂಪುಗಳನ್ನು ಒಮ್ಮೆ ನೋಡಿ ಆದದ್ದು ಆಗಿ ಹೋಗಲಿ; ಇಂಥಾ ಟಿನ್ನುಗಳ ಭಯಾನಕತೆಯನ್ನೇ ಸಹಿಸಿದ ನಾವು ಇವರನ್ನು ಸಹಿಸದೆ ಹೋದರೆ ಹೇಗೆ ಎಂದುಕೊಂಡು

ಬರುತ್ತಾವೆ. ಅದರ ಹತ್ತಿರವೇ ಬಂದುಬಿಟ್ಟವು, 'ಧರಧರ್ರಾ' ಎಂಬ ಟಿನ್ನುಗಳ ಸದ್ದು ಜಗಳವಾಡುತ್ತಿದ್ದವರಿಗೆ ಕೇಳಿಸಿದ್ದೇ ತಡ, ಕತ್ತೆಗಳ ಕಂಡದ್ದೇ ಸಾಕು, ಎಲ್ಲರೂ ಸ್ತಬ್ಧರಾಗಿ ನಿಂತಿದ್ದರು. ಅಗಸರ ಮಾದಪ್ಪ ಕತ್ತೆಗಳ ಕಂಡು ಸ್ವರ್ಗ ಸಿಕ್ಕಿದಂತಾಗಿ ಓಡಿಹೋಗಿ ಅವನ್ನು ಹಿಡಿದುಕೊಳ್ಳಲು ಬರುತ್ತಾನೆ. ಕತ್ತೆಗಳು ಇಡೀ ಊರಿನ ಜನರ ಎಲ್ಲ ಕ್ರಿಯೆಗಳಿಗೂ ಮೌನ ಸಾಕ್ಷಿಯಾಗಿ ನಿಲ್ಲುತ್ತವೆ. ಎಲ್ಲರೂ ಕತ್ತೆಗಳನ್ನು ಕಂಡು, ಅವು ಯಾವ ಕೇರೂ ಮಾಡದಂತೆ ಬಂದು ನಿಂತಿದ್ದನ್ನು ಕಂಡು ಜಗಳದವರು ಸಿಟ್ಟಾದರೂ. ಕತ್ತೆಗಳು ಮತ್ತೆ ಹೆದರಿ, ಏನೋ ಒಂದು ಬಗೆಯ ಶಬ್ದವನ್ನು ಹೊರಡಿಸಿ ಮಾತನಾಡಿಕೊಂಡವು. ಇವರೆಲ್ಲ ಸೇರಿ ಮತ್ತೆ ನಮ್ಮನ್ನು ಹಿಡಿದು ಬಡಿದು ತೊಂದರೆ ಕೊಡುತ್ತಾರೆಂದು ಬೇಸರವಾಗಿ, ದುಃಖ ಮತ್ತು ಪ್ರತಿಭಟನೆ ಎರಡನ್ನೂ ಮುಖದಲ್ಲಿ ತೋರಿಸತೊಡಗಿದವು. ಕತ್ತೆಗಳು ನೋವು, ಸಂಕಟ ಇದಲ್ಲದೆ ಜನರಿಂದ ಸಂಕೋಲೆಗೆ ಸಿಲುಕಿ ಗೊಂದಲಕ್ಕೀಡಾಗಿ ಬಳಲಾಡುತ್ತಿರುವುದನ್ನು ಕಾಣುತ್ತೇವೆ. ಅಂದರೆ ಮಾನವನಿಗಿಂತ ಕತ್ತೆಗಳ ಗುಣಸ್ವಭಾವ ಮೇಲಾಗಿದೆ ಎಂದು ಹೇಳಲಾಗುತ್ತದೆ.

ಅಲ್ಲಿದ್ದವರೆಲ್ಲ, ಈ ಇಡೀ ಘಟನಾವಳಿಯನ್ನು ನೆನೆದು ಈ ಕತ್ತೆಗಳೇ ಕಾರಣ ಎಂದುಕೊಂಡು ಕತ್ತೆಗಳ ಮೇಲೆ ಎರಗಿ 'ಇವುಗಳ್ ರಕ್ತನಾಕೇಯು ಕತ್ತೆಗಳಿಂದ್ಲೇ ಇಷ್ಟೆಲ್ಲಾ ಆದದ್ದು' ಎಂದು ಅವುಗಳಿಗೆ ಸಮಾ ಬಡಿಯಲು ಅಬ್ಬರಿಸಿ ದಢಾರ್ ದಢಾರ್ ಎಮದು ಸೈನಿಕರಂತೆ ನುಗ್ಗಿದರು. ಕತ್ತೆಗಳು ಇದನ್ನು ಕಂಡು ರೊಚ್ಚಿನಿಂದ ಅತಿಭಯಂಕರ ರಭಸವಾಗಿ ಬಂದ ದಾರಿಯಲ್ಲೇ ಹಿಂತಿರುಗಿ ಓಡತೊಡಗುತ್ತವೆ. ಅವುಗಳು ದೆವ್ವದ ಕಾಟದ ಹಾಗೆ ಕೆಲವರಿಗೆ ಕಂಡು ದೊಣ್ಣೆ ಹೊತ್ತುಕೊಂಡು ಅಟ್ಟಿಸಿಕೊಂಡು ಕತ್ತೆಗಳನ್ನು ಹಿಂಬಾಲಿಸಿದರು. ಅವರೆಲ್ಲ ಓಡಿದರು, ಬಿದ್ದರು, ನುಗ್ಗಿದರು, ಅಬ್ಬರಿಸಿದರು, ಕತ್ತೆಗಳ ಹೆಜ್ಜೆ ಮೇಲೆ ಹೆಜ್ಜೆ ಹಾಕಿ ಊರ ಹೊರವಲಯದ ತನಕ ಬೆಂಬತ್ತಿ ಬರುತ್ತಾರೆ. ಕತ್ತೆಗಳು ಇನ್ನಿಲ್ಲದ ವೇಗದಲ್ಲಿ ಕುದುರೆಗಳ ಹಾಗೆ ಹಾರುತ್ತಿದ್ದವು. ಆ ಕತ್ತೆಗಳು ಆ ಊರಿನ ಎಲ್ಲ ತರದ ಎಲ್ಲರ ದುಃಖಗಳ ಆಳಧ್ವನಿ ಲಯವನ್ನು ಸೊಂಟಕ್ಕೆ ಬಿಗಿದುಕೊಂಡೇ ಟಿನ್ನುಗಳಿಂದ ಆ ಸದ್ದನ್ನು ಸೃಷ್ಟಿಸುತ್ತಾ, ಅವರೆಲ್ಲರಿಗೂ ಆ ವಿಷಾದ ಅಳಲಿನ ವಿಪರ್ಯಾಸಗಳ ವಿವರಿಸುವಂತೆ ಜಿಗಿಜಿಗಿದು ಓಡುತ್ತಲೇ ಇರುತ್ತವೆ. ಅಂತಹದ್ದನ್ನೆಲ್ಲ ಈಗವರು ಗ್ರಹಿಸುವ ಸ್ಥಿತಿಯಲ್ಲಿ ಉಳಿದಿರಲಿಲ್ಲ. ಕತ್ತೆಗಳನ್ನು ಕಂಡವರು ದುಷ್ಟಶಕ್ತಿಯನ್ನು ಕಂಡಂತೆ ಆಗಿದ್ದರು. ಕತ್ತೆಗಳ ಬಾಯಲ್ಲಿ ಓಡಿದ ದಣಿದ ಸುಸ್ತು, ಸಿಟ್ಟು, ಸಂಕಟ, ನೋವು ಎಲ್ಲವೂ ಒತ್ತಡಗೊಂಡು ಜೊಲ್ಲು ಬಾಯಿಂದ ಉಕ್ಕಿ ಉಕ್ಕಿ ಬರುತ್ತಿತ್ತು. ರಕ್ತ ಕಾರಿಕೊಂಡು ಸತ್ತರೂ ಸರಿಯೇ ಇನ್ನೂ ಈ ಜನರ ಈ ಊರ

ಸಹವಾಸ ಬೇಡ ಎಂಬಂತೆ ಅವು ಓಡುತ್ತಲೇ ಇದ್ದವು. ಸುಸ್ತಾದವರು ಅಲ್ಲಲ್ಲೇ ನಿಂತರು. ಮತ್ತೆ ಕೆಲವರು ಹೋಗುತ್ತಲೇ ಇದ್ದರು. ಹೋಗುತ್ತಾ, ಓಡುತ್ತಾ ಎಲ್ಲ ಹೊಲೆಯರೂ ದಕ್ಷಬ್ರಹ್ಮನ ವಿಷಕುಂಟೆಯಿಂದ ಸತ್ತು, ಕೊನೆಗೊಬ್ಬನೇ ಪುಟ್ಟ ಹೊಲೆಯ ಹುಡುಗ ಉಳಿದಿದ್ದಾಗ ಆತನನ್ನು ಅಗಸರವನೊಬ್ಬ ರಕ್ಷಿಸಿ ಇವನೇ ತನ್ನ ಮಗ ಎಂದು ದಕ್ಷಣೆಗೆ ಹೇಳಿ ಜೊತೆಯಲ್ಲೇ ಬಾಳೆ ಎಲೆಯಲ್ಲಿ ಉಂಡಂತೆ ಕೊನೆಗೊಬ್ಬ ಆ ಕೇರಿಯ ಹೈದ ಕತ್ತೆಗಳನ್ನು ಹೇಗಾದರೂ ಮಾಡಿ ಕರೆತರುವೆ ಎಂದು ಅನಂತಾನಂತವಾಗಿ ದಿಗಂತದ ತುದಿ ತನಕ ಹಿಂಬಾಳಿಸುತ್ತಲೇ ಇದ್ದ. ಇಡೀ ಊರು ಕತ್ತಲೆಯಲ್ಲಿ ಕರಗಿ ಹೋಗುತ್ತಿತ್ತು.

ತಪ್ಪಿಲ್ಲದ ತಪ್ಪಿಗೆ ಅಗಾಧವಾದ ಶಿಕ್ಷೆ ಈ ಕತ್ತೆಗಳಿಗೆ ಎಂದು ಹೇಳುವಲ್ಲಿ ಇಡೀ ಊರಿನ ಸ್ಥಿತಿ ಕಂಡುಬರುವ ಪ್ರಸಂಗವಿದು. ಸಣ್ಣ ಘಟನೆ ಊರಿನ ಅಶಾಂತಿಗೆ ಕಾರಣವಾಗಿ ಒಬ್ಬರ ಮೇಲೊಬ್ಬರ ದ್ವೇಷದಲ್ಲಿ ಮುಳುಗಿ ಕೊನೆಗೆ ಅದರ ಅಂತಿಮ ಬಲಿ ಪಶುಗಳು ದಲಿತರಾಗಿರುತ್ತಾರೆ. ಬಲಿಷ್ಠರು ಬಲಿಷ್ಠರಲ್ಲದವರ ಮೇಲೆ ನಿರಂತರವಾಗಿ ನಡೆಯುವ ಶೋಷಣೆಯೂ ಕಂಡು ಬರುತ್ತದೆ. ಕಥೆಯಲ್ಲಿ ಮೊಗಳ್ಳಿ ಅವರು ಪ್ರಾಣಿಗಳಿಗೂ ಭಾವನೆ ತುಂಬಿ ಆ ಪ್ರಾಣಿಗಳಿಗೆ ಯೋಚನೆಯ ಶಕ್ತಿ ಇದೆ ಎಂದು ತೋರ್ಪಡಿಸುವ ನಿಟ್ಟಿನಲ್ಲಿ ಮನುಷ್ಯನಂತೆ ಪ್ರಾಣಿಗಳಿಗೂ ಬುದ್ಧಿ ಇದೆ ಎಂದು ಲೇಖಕರು ಚಿಂತಿಸಿದ್ದಾರೆ.

**'ಪಟೇಲ'** ಕಥೆಯಲ್ಲಿ ಕಥೆಗಾರರು ಹೊಲಗೇರಿ 'ಕುಂಟ' ಎಂಬ ಪಾತ್ರದ ಮೂಲಕ ದಲಿತ ಮಕ್ಕಳ ಪ್ರತಿಭೆಯನ್ನು ಅನಾವರಣಗೊಳಿಸುತ್ತಾರೆ. ಸುಪ್ತ ಸ್ಥಿತಿಯಲ್ಲಿದ್ದ ಅವರ ಪ್ರತಿಭೆಯ ಚಿಲುಮೆಯನ್ನು ಮೇಲ್ವರ್ಗದವರು ಪ್ರತಿಕಾರಕ್ಕೆ ತಕ್ಕಂತೆ 'ಕುಂಟ'ನು ಕಬ್ಬಡಿಯಾಟದಲ್ಲಿ ತನ್ನ ಚಾಣಾಕ್ಷತನವನ್ನು ತೋರುತ್ತಾನೆ. ಇದಕ್ಕೆ ಮೂಲಕಾರಣ ಆ ಶಾಲೆಯ ಕೆಳಜಾತಿಯ ಹೆಡ್‌ಮಾಸ್ಟರ್ ಎಂದು ಗುರುತಿಸಿಕೊಂಡು ತನ್ನ ಸಮುದಾಯದವರ ಮಕ್ಕಳನ್ನು ಪ್ರೋತ್ಸಾಹಿಸಿ ಬೆಳೆಸುತ್ತಾನೆ. ಪ್ರತಿಭೆಯು ಯಾರ ಸ್ವತ್ತು ಅಲ್ಲ, ಯಾರ ಹಕ್ಕು ಅಲ್ಲ ಎಂಬಂತೆ ಹೊಲಗೇರಿಯ ಕುಂಟನಲ್ಲಿದ್ದ, ಅದಮ್ಯ ಶಕ್ತಿಯನ್ನು ಕಬ್ಬಡಿಯಾಟದ ಮೂಲಕ ತೋರ್ಪಡಿಸಿ, ಮೇಲ್ಜಾತಿಯವರ ಸಮಾನಕ್ಕೆ ಬೆಳೆದು ನಿಲ್ಲುವ ರೀತಿಗಳನ್ನು ಕಥೆಗಾರರು ತಮ್ಮ ಕಥೆಯಲ್ಲಿ ಮಾರ್ಮಿಕವಾಗಿ ಅಭಿವ್ಯಕ್ತಿಸುತ್ತಾರೆ.

**'ಕಾಳಿ'** ಕಥೆಯಲ್ಲಿ ದಲಿತ ಮಕ್ಕಳು 'ಅನ್ನ'ದ ಆಸೆಗಾಗಿ ಶಾಲೆಯನ್ನು ಬಿಡುವ ಪರಿಸ್ಥಿತಿಯು ಒದಗಿಬರುತ್ತದೆ. ಕಾರಣ ಶೋಷಿತರಿಗೆ ತೃಪ್ತಿದಾಯಕವಾದ, ಪೌಷ್ಠಿಕ ಆಹಾರಗಳು ದೊರೆಯದೆ ಇರುವುದು ದುರಂತವಾಗಿದೆ. ಕಾಳಿಯ ಮಕ್ಕಳು ಇವಳ ಜೊತೆ ತಂಗಳಿನ ಅನ್ನಕ್ಕಾಗಿ ಶಾಲೆಯನ್ನು ಬಿಟ್ಟು ಹೋಗುವ ಸಂದರ್ಭ ಅವರ ದಾರಿದ್ರತನವನ್ನು

ಸೂಚಿಸುತ್ತದೆ. ಜೀತಾಗಾರಿಕೆಯಿಂದ ಬಂದಂತಹ ಆಹಾರದಿಂದ ಆಕೆಯ ಮಕ್ಕಳು, ಬೀದಿಯ ಹುಡುಗರು ತುತ್ತಿನ ಅನ್ನವನ್ನು ಹಂಚಿಕೊಂಡು ತಿನ್ನುವ ಪರಿಸ್ಥಿತಿ ಸಹೃದಯಿಗಳ ಅಂತಃಕರಣವನ್ನು ಕರಗಿಸಿಬಿಡುತ್ತದೆ.

ಈಕೆಯ ಮಗನು ವಿದ್ಯಾಭ್ಯಾಸವನ್ನು ಬಿಟ್ಟು ಹಸಿವಿಗಾಗಿ ಕುಂಟು ನೆಪವನ್ನು ಹೇಳುತ್ತಾ ದೊಡ್ಡವರ ಮನೆಯಲ್ಲಿ ಜೀತಕ್ಕೆ ಇರಲು ಪ್ರಯತ್ನಿಸುತ್ತಾನೆ. ಇಂತಹ ದುರ್ಬಲ ಸ್ಥಿತಿಯನ್ನು ನೋಡಿದ ಕಥೆಗಾರರು ದಲಿತ ಸಮುದಾಯದ ಮಕ್ಕಳಲ್ಲಿ ಹಸಿವಿನ ತೀವ್ರತೆಯನ್ನು, ಕಾಳಿಯು ತನ್ನ ಮಕ್ಕಳ ಹೊಟ್ಟೆಯನ್ನು ತುಂಬಿಸಲು ಪಡುವಂತಹ ಸ್ಥಿತಿಯನ್ನು ಮಕ್ಕಳು ಕೂಡ ಆಕೆಯ ಜೊತೆ ತೊತ್ತಿನ ಊಟಕ್ಕೆ ಅಲೆದಾಡುವ ದಯನೀಯವಾದ ಸ್ಥಿತಿಯನ್ನು ಚಿತ್ರಿಸುವುದರ ಮೂಲಕ ಹಸಿವಿನ ಭೀಕರತೆಯನ್ನು ಅಭಿವ್ಯಕ್ತಪಡಿಸಿದ್ದಾರೆ.

**‘ಕಿಚ್ಚು’** ಕಥೆಯಲ್ಲಿ ‘ಪುಟ್ಟಿ’ಯ ಪಾತ್ರವು ಬಹುಮುಖ್ಯವಾದುದು. ಶೋಷಿತ ಸಮುದಾಯದ ಹೆಣ್ಣುಮಕ್ಕಳಲ್ಲಿ ಹಸಿವು ಹೇಗೆ ತಾಂಡವವಾಡುತ್ತಿದೆ ಎಂಬುದನ್ನು ಕಥೆಯಲ್ಲಿ ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾರೆ. ರೊಟ್ಟಿಗಾಗಿ ಪರದಾಡುವಂತಹ ಭೀಕರವಾದ ಸನ್ನಿವೇಶವನ್ನು ಲೇಖಕರು ತಮ್ಮ ಕೇರಿ ಮಕ್ಕಳ ವಾಸ್ತವಿಕ ಸ್ಥಿತಿಯನ್ನು ಅರಿತು ಅವುಗಳನ್ನೇ ತಮ್ಮ ಕಥೆಯ ವಸ್ತುವನ್ನಾಗಿಸಿಕೊಂಡು ಸಮಾಜದ ಮುಖ್ಯವಾಹಿನಿಗೆ ತೆರೆದಿಡುತ್ತಾರೆ. ಪುಟ್ಟಿಯು ಹಸಿವನ್ನು ನೀಗಿಸಿಕೊಳ್ಳುವಾಗ ಪಕ್ಕದಲ್ಲಿದ್ದ ‘ನಾಯಿ’ ರೊಟ್ಟಿಯನ್ನು ಕಿತ್ತುಕೊಂಡು ಓಡಿಹೋಗುತ್ತದೆ. ಇಂತಹ ಸಂದರ್ಭಗಳು ಕರುಳು ಕರಗಿಸುವಂತಹ ಘಟನೆಗಳಾಗಿವೆ. ಸಮಾಜದಲ್ಲಿ ಮಕ್ಕಳ ಹಸಿವಿನ ಹಂಬಲತೆ ಎಷ್ಟಿದೆ ಎಂಬುವುದನ್ನು ಸ್ವ-ಅನುಭವದ ಮೂಲಕ ಕಥೆಗಾರರು ಚಿತ್ರಿಸಿದ್ದಾರೆ.

**‘ವ್ಯೂಹ’** ಕಥೆಯ ‘ದಾಸ’ನು ಗೌಡರ ಮನೆಯಲ್ಲಿ ನಿಷ್ಠೆಯಿಂದ ಕೆಲಸ ಮಾಡುತ್ತಿದ್ದನು. ಅದೇ ರೀತಿ ದಾಸನಿಗೆ ನಾಯಿಯು ನಿಷ್ಠೆಯಿಂದ ತನ್ನನ್ನು ಸಾಕಿದ ಪ್ರತಿಫಲಕ್ಕಾಗಿ ಸ್ವಾಮಿನಿಷ್ಠೆಯಿಂದ ದಾಸನನ್ನು ಕಾಯುತ್ತಿತ್ತು. ಹೀಗಿರುವಾಗ ಒಂದು ದಿವಸ ದಾಸನಿಗೆ ಗೌಡರು ದಿನದ ಕೂಲಿಯನ್ನು ಕೊಟ್ಟಿರುವುದಿಲ್ಲ. ಆದಕಾರಣ ದಾಸನಿಗೆ ತನ್ನ ಹಸಿವನ್ನು ನೀಗಿಸಿಕೊಳ್ಳಲು ಆಗದ ಪರಿಸ್ಥಿತಿ ಎದುರಾಗುತ್ತದೆ. ನಾಯಿಯು ದಾಸನನ್ನೆ ನಂಬಿಕೊಂಡು ಬದುಕುತ್ತಿರುವುದರಿಂದ ನಾಯಿಯ ಒಡಲಿಗೂ ಕೂಡ ಪೆಟ್ಟುಬೀಳುತ್ತದೆ.

ಇಂತಹ ಸಂದರ್ಭದಲ್ಲಿ ಕೋಪದ ಅಸಹಾಯಕ ಸ್ಥಿತಿಯಲ್ಲಿದ್ದ, ದಾಸನು ಹಸಿವನ್ನು ನೀಗಿಸಿಕೊಳ್ಳಬೇಕು ಎಂಬ ಯೋಚನೆಯಲ್ಲಿ ಸಿಲುಕಿರುವಾಗ ಅವನ ಬಳಿನಾಯಿ ಬಂದು ಕೂಯಿ, ಕುಯಿ ಎಂದು ಶಬ್ಧಮಾಡುತ್ತದೆ. ಇದು ನಾಯಿಗೂ ಕೂಡ ಹಸಿವು ಆಗಿದೆ ಎಂಬ

ಅರ್ಥವನ್ನು ಸೂಚಿಸುತ್ತದೆ. ಇದನ್ನು ಮನಗಂಡ ದಾಸನು ಕೋಪಗೊಂಡು ಸಿಟ್ಟಿನಿಂದ ನಾಯಿಯನ್ನು ಬಡಿಯುತ್ತಾನೆ. ಇಂತ ಧಾರುಣ ಸ್ಥಿತಿಯಲ್ಲಿ ನಾಯಿಯು ಭೂಮಿಯ ಮೇಲೆ ಬಿದ್ದಿರುವಾಗ, ಅದರ ಮರಿಗಳು ಹಾಲನ್ನು ಕುಡಿಯಲು ಬಂದಾಗ ತಾಯಿ ನಾಯಿಯ ಹಾಲು ದೊರೆಯದೆ ಇದ್ದು, ಪ್ರಾಣಿಗಳಿಗೂ ಕೂಡ ಹಸಿವಿನ ತೀವ್ರತೆಯಿಂದ ಬಳಲುವುದನ್ನು ಕಾಣುತ್ತೇವೆ.

ಮತ್ತೊಮ್ಮೆ ನಾಯಿಮರಿಗಳು ತಾಯಿ ನಾಯಿಯ ಬಳಿ ಬಂದು ಹಾಲಿಗಾಗಿ ಹಂಬಲಿಸಿದಾಗ ಅದು ರೊಚ್ಚಿಗೆದ್ದು ಮರಿಗಳನ್ನು ಕಚ್ಚುತ್ತದೆ. ಕಾರಣ ದಾಸನು ಬಡಿದ ಏಟಿಗೆ ನಾಯಿಯು ಇಡೀ ಊರೇ ಪ್ರತಿಧ್ವನಿಸುವಂತೆ ನೋವಿನಿಂದ ಕಿರುಚಿಕೊಳ್ಳುತ್ತದೆ. ಅದೊಂದು ದೊಡ್ಡ ಧ್ವನಿಗೆ ಊರಲ್ಲಿದ್ದ ನಾಯಿಗಳೆಲ್ಲ ಏನೋ ಪ್ರಳಯವಾಗಿತ್ತೇನೋ ಎಂಬಂತೆ ಒಟ್ಟೊಟ್ಟಾಗಿ ಕೂಗಾಡಿಕೊಂಡವು. ಬದುಕಿದೆಯೇ ಬಡಜೀವವೆ ಎಂದು ಆ ನಾಯಿಯು ತನ್ನ ಮರಿಗಳ ಜೊತೆ ಬಂದು ಸೇರಿಕೊಂಡಿತ್ತು. ಹೀಗೆ ಕತೆಗಾರರು ಪ್ರಾಣಿಗಳ ನಿಯತ್ತು, ಹಸಿವಿನ ಮೂಲಕ ದಲಿತ ಕೇರಿಯ ವಾಸ್ತವ ಚಿತ್ರಣವನ್ನು ಅಭಿವ್ಯಕ್ತಿಸುತ್ತಾರೆ.

**'ಆತ್ಮದ ಕವಚ'** ಕಥೆಯಲ್ಲಿ ಲೇಖಕರು 'ತಾಯಿ ಇಲ್ಲದ ತಬ್ಬಲಿ' ಹುಡುಗನ ಸ್ಥಿತಿಯ ಬಗ್ಗೆ ಚಿತ್ರಿಸಿದ್ದಾರೆ. ತಂದೆ ಇದ್ದರೂ ಸಮಾಜದಲ್ಲಿ ಯಾರಿಗೂ ಬೇಡವಾಗಿ ಮೂಲೆಗುಂಪಾಗಿರುವ ಎಷ್ಟೋ ಮಕ್ಕಳ ಬದುಕಿನ ವಾಸ್ತವತೆ ಕಥೆಯಲ್ಲಿ ಹೊರಹೊಮ್ಮುತ್ತದೆ. ಪಿತೃಪ್ರಧಾನ ಸ್ಥಾನದಲ್ಲಿದ್ದ ಈತನು ತನ್ನ ಮಗನನ್ನು ಔದರ್ಯದಿಂದ ನೋಡಿಕೊಳ್ಳುವ ಬದಲು ದಾರ್ಷ್ಟ್ಯ ಮನೋಭಾವದಿಂದ ವರ್ತಿಸುವುದು ಮಗನ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ.

ತಾಯಿ ಕಳೆದುಕೊಂಡ ದುಃಖದಲ್ಲಿದ್ದ ಮಗುವು ಅಪ್ಪನ ಪ್ರೀತಿವಾತ್ಸಲ್ಯವಿಲ್ಲದೆ, ಮಾನಸಿಕ ಒತ್ತಡಕ್ಕೆ ಒಳಗಾಗುತ್ತದೆ. ಬೆಳೆಯುತ್ತಾ ಮಗು ಕಲಿಕೆಯ ವಾತಾವರಣವನ್ನು ಕಳೆದುಕೊಂಡು, ತನ್ನ ತಂದೆಯ ನಿಂದನೆಗೆ ಅಣಿಯಾಗುತ್ತದೆ. "ಅವಳನ್ನು ಕಳುಹಿಸಿದ ಜಾಗಕ್ಕೆ ನಿನ್ನನ್ನು ಕಳಿಸಿಬಿಡುವೆ"[೩೭] ಎಂದು ಉಗ್ರವಾಗುತ್ತಿದ್ದ, ನನ್ನನ್ನು ದಂಡಿಸುವ ಆಯುಧವನ್ನು ನಾನೇ ಜೋಪಾನವಾಗಿ ಕಾಯ್ದಿಡಬೇಕಿತ್ತು. ಏಕೆಂದರೆ ಕಾರಣವಿಲ್ಲದೆ, ಅಪ್ಪನ ಹೊಡೆತಕ್ಕೆ ಸಿಕ್ಕರೆ ತಡೆಯಲಾರದ ಸ್ಥಿತಿಗೆ ಹೋಗಬೇಕಾಗಿತ್ತು.

ಆ ಬಾರುಗೋಲು, ಮುಳ್ಳಿನಕೋಲು ಬಿದುರು ಬೆತ್ತ, ರೀಪಿಸ್‌ಪಟ್ಟಿಗಳನ್ನು ಹಾಗಾಗ ಗಮನಿಸಿ ಅವು ಅಪ್ಪನ ಬಳಿ ಸಲಿಸಾಗಿ ಸಿಗದೆ ಇರುವಂತೆ ನೋಡಿಕೊಳ್ಳುತ್ತಿದ್ದೆ. ಮಗುವಿನ

ಈ ಭಯದ ಮಾತುಗಳು ಈತನ ಮನಸ್ಸಿನ ಮೇಲೆ ಗಾಢವಾದ ಕ್ರೌರ್ಯತ್ವಕ್ಕೆ ದಾರಿ ಮಾಡಿಕೊಡುತ್ತದೆ.

ಮಲತಾಯಿಯಾದರು ಗೌರವದಿಂದ ನೋಡಿಕೊಳ್ಳುತ್ತಾಳೆ ಎಂಬ ನನ್ನ ಆಸೆಯು ಹುಸಿಯಾಯಿತು. ಸಣ್ಣಪುಟ್ಟ ವಿಚಾರಕ್ಕೆಲ್ಲ ತಂದೆಯ ಸಿಟ್ಟನ್ನು ನನ್ನ ಮೇಲೆ ಪ್ರಯೋಗ ಮಾಡುತ್ತಿದ್ದಳು. ನಾನು ಎಷ್ಟೊ ನಿಷ್ಠೆಯಿಂದ ಇದ್ದರು ಅಪ್ಪ ಒಂದಿಲ್ಲೊಂದು ತಪ್ಪು ಹುಡುಕುತ್ತಿದ್ದ. "ಅವನನ್ನು ಹುಟ್ಟಿಸಿರುವುದು ನಾನೆ ಕೊಂದುಬಿಡುವುದು ನಾನೆ. ಯಾವನೋ ಯಾವಳೋ ಅಡ್ಡಬರುವಂತಿಲ್ಲ"[೩೮] ಎಂದು ಕಟ್ಟಪ್ಪಣೆ ಮಾಡಿದ.

ತಂದೆಯ ಕೋಪೋದ್ರೇಕದ ಮಾತುಗಳು ನನ್ನನ್ನು ಯಾಕದ್ರು ಈ ಭೂಮಿ ಮೇಲೆ ಹುಟ್ಟಿಸಿದೆ ಎಂಬ ಮುಗ್ಧ ಮಗುವಿನ ನೋವನ್ನು ಗಮನಿಸಿದರೆ, ಹೃದಯಮಿಡಿಯುವಂತ ಸನ್ನಿವೇಶಗಳನ್ನು ನೋಡಬಹುದು. ಮಗನ ಭವಿಷ್ಯವನ್ನು ರೂಪಿಸುವುದು ಆತನ ಆದ್ಯಕರ್ತವ್ಯ ಆಗಿದೆ. ಆದರೆ ತನ್ನ ಮಗನನ್ನು ಗೌಡರ ಮನೆಗೆ ಜೀತಕ್ಕೆಂದು ಕರೆದುಕೊಂಡು ಹೋಗುತ್ತಾನೆ. ಇದನ್ನು ಗ್ರಹಿಸಿದ ಗೌಡರು "ಅಲ್ಲಯ್ಯಾ ಇವನನ್ನು ಈಗ್ಲೇ ಯಾಕಯ್ಯ ಈ ಜೀತಕ್ಕೆ ಇಡ್ತೀಯೆ... ಇವನನ್ನು ನೋಡಿದ್ರೆ ಜೀತಕ್ಕೆ ತಕ್ಕವನಲ್ಲ ಅನಿಸಿತ್ತೆ, ನಾಲ್ಕು ಅಕ್ಷರ ಕಲಿಸಯ್ಯಾ ನಿಮ್ಮ ಜಾತಿಯವರಿಗೆ ಎಲ್ಲಾ ಫ್ರೀಯಾಗೇ ಸಿಕ್ತದಲ್ಲಯ್ಯಾ"[೩೯] ಎಂದು ಹಿಂದಕ್ಕೆ ಕಳುಹಿಸಿಬಿಟ್ಟರು.

ಗೌಡರಲ್ಲಿ ಇರುವಷ್ಟು ವಿವೇಕದ ಮಾತುಗಳು ತನ್ನ ತಂದೆಯಲ್ಲಿ ಇಲ್ಲವಲ್ಲ ಎಂಬ ಹತಾಸೆಯನ್ನು ಮಗು ವ್ಯಕ್ತಪಡಿಸುತ್ತಾ, ನೋವಿನ ಸುಳಿಗೆ ಸಿಲುಕುತ್ತಾನೆ. ದೊಡ್ಡವರ ಮಾತುಗಳು ತನ್ನ ತಂದೆಗೆ ಮನವರಿಕೆಯಾಗಿದೆ ಎಂದು ನಾನು ಭಾವಿಸಿಕೊಂಡರೆ, ತಂದೆಯಲ್ಲಿ ಕೋಪವು ಇನ್ನೂ ಅತಿರೇಕಕ್ಕೆ ಹೋಗಿತ್ತು.

"ಇನ್‌ಮ್ಯಾಲೆ ನಿನ್ನ ನನ್ನ ಮನೇಲೆ ಜೀತಕ್ಕಾಗಿ ಸವೆಸಿ ಸವೆಸಿ ಸಾಯಿಸ್ದೆಯಿದ್ರೆ ನಾ ಗಂಡ್ಸೇ ಅಲ್ಲ ಕಲಾ"[೪೦] ಎಂದು ವಯಸ್ಸಿಗೆ ಮೀರಿದ ಕೆಲಸವನ್ನು ಮಗನಿಗೆ ಹೇರತೊಡಗಿದ್ದ. ಹುಡುಗನಿಗೆ ತನ್ನ ತಂದೆಯ ನಡೆನುಡಿಗಳನ್ನು ನೋಡಿ ಅಂತರಂಗದಲ್ಲಿ ಭಯದ ತೊಳಲಾಟಕ್ಕೆ ಸಿಕ್ಕಿ ನರಳಾಡುತ್ತಾನೆ. ತನ್ನ ತಾಯಿಯ ಸ್ಥಾನದಲ್ಲಿದ್ದ ಮಲತಾಯಿಯು ಕೂಡ ತನ್ನನ್ನು ವಾತ್ಸಲ್ಯದಿಂದ ನೋಡಿಕೊಳ್ಳುತ್ತಾಳೆಂಬ ಆಸೆಯು ಮುದುಡಿತ್ತು. ದಲಿತ ಸಾಹಿತ್ಯದಲ್ಲಿ ಹೆಚ್ಚಾಗಿ ಮಕ್ಕಳು ಮನೆಯವರ ಜಂಜಾಟಕ್ಕೆ ಸಿಲುಕಿ ನಲುಗುವ ಎಷ್ಟೋ ವಿದ್ರಾವಕ ಘಟನೆಗಳು ನಡೆಯುವುದನ್ನು ಇಂದಿಗೂ ಗಮನಿಸಬಹುದು.

## ಅಡಿಟಿಪ್ಪಣಿಗಳು

೧. ಮೊಗಳ್ಳಿ ಗಣೇಶ್, ಮೊಗಳ್ಳಿ ಕಥೆಗಳು, ಪು. ಸಂ. ೪೯.

೨. ಅದೇ., ಪು. ಸಂ. ೬೪

೩. ಅದೇ., ಪು. ಸಂ. ೫೩

೪. ಅದೇ., ಪು. ಸಂ. ೨೫

೫. ಅದೇ., ಪು. ಸಂ. ೨೦೩

೬. ಅದೇ., ಪು. ಸಂ. ೧೩

೭. ಅದೇ., ಪು. ಸಂ. ೧೦೮

೮. ಅದೇ., ಪು. ಸಂ. ೯

೯. ಅದೇ., ಪು. ಸಂ. ೧೧

೧೦. ಅದೇ., ಪು. ಸಂ. ೧೧

೧೧. ಅದೇ., ಪು. ಸಂ. ೩

೧೨. ಅದೇ., ಪು. ಸಂ. ೪

೧೩. ಅದೇ., ಪು. ಸಂ. ೪

೧೪. ಅದೇ., ಪು. ಸಂ. ೧೮

೧೫. ಅದೇ., ಪು. ಸಂ. ೧೯

೧೬. ಅದೇ., ಪು. ಸಂ. ೨೬

೧೭. ಅದೇ., ಪು. ಸಂ. ೨೬

೧೮. ಅದೇ., ಪು. ಸಂ. ೩೩

೧೯. ಅದೇ., ಪು. ಸಂ. ೨೯

೨೦. ಅದೇ., ಪು. ಸಂ. ೩೫

೨೧. ಅದೇ., ಪು. ಸಂ. ೯

೨೨. ಅದೇ., ಪು. ಸಂ. ೧೦

೨೩. ಅದೇ., ಪು. ಸಂ. ೧೦

೨೪. ಅದೇ., ಪು. ಸಂ. ೧೧

೨೫. ಅದೇ., ಪು. ಸಂ. ೧೧

೨೬. ಅದೇ., ಪು. ಸಂ. ೧೨

೨೭. ಅದೇ., ಪು. ಸಂ. ೧೨

೨೮. ಅದೇ., ಪು. ಸಂ. ೧೨

೨೯. ಅದೇ., ಪು. ಸಂ. ೧೩

೩೦. ಅದೇ., ಪು. ಸಂ. ೧೩

೩೧. ಅದೇ., ಪು. ಸಂ. ೧೪

೩೨. ಅದೇ., ಪು. ಸಂ. ೧೫

೩೩. ಅದೇ., ಪು. ಸಂ. ೧೭೩

೩೪. ಅದೇ., ಪು. ಸಂ. ೭

೩೫. ಅದೇ., ಪು. ಸಂ. ೭

೩೬. ಅದೇ., ಪು. ಸಂ. ೮

೩೭. ಅದೇ., ಪು. ಸಂ. ೧೮

೩೮. ಅದೇ., ಪು. ಸಂ. ೩೦

೩೯. ಅದೇ., ಪು. ಸಂ. ೩೧

೪೦. ಅದೇ., ಪು. ಸಂ. ೩೧

# ಅಧ್ಯಾಯ ಐದು

# ಕಥೆಗಳಲ್ಲಿನ ಸಾಮಾಜಿಕ ಸ್ಥಿತ್ಯಂತರಗಳು

ಕಥೆಗಾರರು ಸಾಮಾಜಿಕ ಸ್ಥಿತಿಗತಿಗಳನ್ನು ತಮ್ಮ ಕಥಾಸಂಕಲನಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಕಥೆಗಳಲ್ಲಿ ತಾವು ಕಟ್ಟಿಕೊಟ್ಟಂತ ಅನುಭವದ ಬರಹವು ಹೆಚ್ಚು ವಾಸ್ತವಿಕತೆಯನ್ನು ಪ್ರತಿಬಿಂಬಿಸುತ್ತದೆ. ದಲಿತ ಸಮುದಾಯದ ಒಳಸಂವೇದನೆಯನ್ನು ಕಥೆಗಾರರು ಜಾನಪದದ ಹಿನ್ನಲೆಯ ಸ್ವರೂಪದ ಭಾಷಿಕ ನೆಲೆಗಳೊಡನೆ ಭಿನ್ನವಾದ ಶೈಲಿಯಿಂದ ಅಭಿವ್ಯಕ್ತಪಡಿಸಿದ್ದಾರೆ.

## ೧.೧. ಗ್ರಾಮ್ಯ ಜೀವನದ ಮೂಲ ಸೆಲೆಗಳು:

ಒಬ್ಬ ದಲಿತ ಬರಹಗಾರರಾಗಿ ಮೊಗಳ್ಳಿ ಗಣೇಶ್ ಅವರು ತಾವು ಕಂಡುಂಡ ಅನುಭವದೊಂದಿಗೆ ಗ್ರಾಮೀಣ ಜನರ ಬದುಕಿನ, ಮೂಲ ನೆಲೆಯ ಜೊತೆಗಿನ ತಮ್ಮ ಕಥೆಗಳ ಮೂಲಕ ಸಾಮಾಜಿಕ ಸ್ಥಿತ್ಯಂತರಗಳನ್ನು ಅಭಿವ್ಯಕ್ತಿಸುತ್ತಾರೆ. ಇವರ ಒಂದೊಂದು ಕಥೆಗಳು ದಲಿತ ಲೋಕದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ವ್ಯಕ್ತಪಡಿಸುತ್ತಾರೆ ಎಂದರೆ ತಪ್ಪಾಗಲಾರದು. ವಾಸ್ತವಿಕತೆಯಲ್ಲಿ ದಲಿತ ಜನಾಂಗದ ಬರುವಿಕೆಯನ್ನು ಸಾದಾರಪಡಿಸುವ ಕ್ರಮವೇ ವಿಭಿನ್ನವಾದುದು.

**'ಒಂದು ಹಳೇ ಚಡ್ಡಿ'** ಕಥೆಯಲ್ಲಿ ಸೀನಿಯ ಚಡ್ಡಿಯ ವಿಚಾರಕ್ಕೆ ಸಂಬಂಧಪಟ್ಟಂತೆ ಅವರ ಇರುವಿಕೆಯ ಮೂಲ ಬದುಕಿನ ನೈಜತೆಯನ್ನು ಎತ್ತಿ ತೋರಿಸುತ್ತದೆ. ಒಂದು ಚಡ್ಡಿಯ ವಿಚಾರಕ್ಕೆ ಬಿಚ್ಚಿಕೊಂಡ ಕಥೆಯಲ್ಲಿ ನಾಗರಾಜ ತನ್ನ ಹೆಂಡತಿಯನ್ನು ನೋಡುವ ದೃಷ್ಟಿಕೋನ ದಲಿತ ಜನಾಂಗದ ವಾಸ್ತವಿಕತೆಯನ್ನು ಪ್ರತಿಬಿಂಬಿಸುತ್ತದೆ. ನಾಗರಾಜನು ಜವಾಬ್ದಾರಿ ಅರಿತವನಾದರು ಹೆಂಡ, ಹೆಣ್ಣು ಮುಂತಾದ ಚಟಗಳ ಆಮಿಷಕ್ಕೆ ಬಲಿಯಾಗಿರುತ್ತಾನೆ. ಭಯದ ವಾತಾವರಣದಲ್ಲಿದ್ದ ಸೀನಿಯು ಅಪಘಾತಕ್ಕೆ ಸಿಲುಕಿ, ಸಾವೀಗೀಡಾಗುವಂತ ಸಂದರ್ಭ ಮದುವೆ ಮನೆಯನ್ನು ಒಂದು ಸೂತಕದ ಛಾಯೆಯಂತೆ ಆವರಿಸುತ್ತದೆ. ಇದು ಕಥೆಯಲ್ಲಿ ಕಂಡು ಬರುವಂತ ದಲಿತ ಕೇರಿಯ ಸಮಾಜದ ಮೂಲ ಸ್ಥಿತಿಯೆ ಆಗಿದೆ.

**'ಅಲ್ಲಿ ಅಳು ಈಗಲೂ'** ಕಥೆಯಲ್ಲಿ ಶೋಷಿತ ಜನಾಂಗದಲ್ಲಿ ಮೂಢನಂಬಿಕೆಯನ್ನೇ ಒಂದು ಹಬ್ಬನವನ್ನಾಗಿ ಆಚರಿಸುವ ಸಂಸ್ಕೃತಿ ಕಥೆಯ ತಿರುಳಲ್ಲಿದೆ. "ಹೂವ' ಎಂಬ ಮಗುವು ಯಾವುದೊಂದು ಕಾರಣಕ್ಕೆ ಅಳುತ್ತಿರುವಾಗ, ಅವನ ಸ್ಥಿತಿಯನ್ನು ನೈಜವಾಗಿ ಅರಿಯಲಾಗದೆ, ಅವನಿಗೆ ಎಲ್ಲರು ದೆವ್ವ ಮತ್ತು ದೈವಿ ಸ್ವರೂಪವೆಂದು ಭಾವಿಸಿ ತಮ್ಮ ತಮ್ಮ

ಅಜ್ಞಾನದ ಮಡುವಿನಲ್ಲಿ ಯೋಚಿಸುವುದನ್ನು ಕಂಡರೆ ಇಡೀ ದಲಿತರ ಬದುಕಿನ ಸೊಗಡನ್ನು ನೈಜ ನಿಷ್ಠೂರತೆಯನ್ನು ಕಟ್ಟಿಕೊಟ್ಟಿದ್ದಾರೆ.

'ಹೂವ'ನ ದೀರ್ಘಸ್ವರದ ಅಳುವಿನಲ್ಲಿ ಆ ಜನರ ಅವಿವೇಕದಿಂದ ಆತನಿಗೆ ದೆವ್ವ ಹಿಡಿದಿದೆ ಎಂದು ಭಾವಿಸಿ ಹಿಂಸಿಸುವ ಮುಖಾಂತರ ಪಿಶಾಚಿ ಬಿಡಿಸಲು ಪ್ರಯತ್ನಿಸುವುದನ್ನು ಕಾಣುತ್ತೇವೆ. ಇದೊಂದು ವಿಚಾರದಲ್ಲಿ ದಲಿತರಿಗೆ ಪರಂಪರೆಯ ಸಂಪ್ರದಾಯದ ಮೂಲ ನೆಲೆಯಾಗಿರುತ್ತದೆ.

**'ಬತ್ತ'** ಕಥೆಯಲ್ಲಿ ಮಾಯಮ್ಮ ಮತ್ತು ತೋಪಮ್ಮನ ಪಾತ್ರಗಳು ದಲಿತ ಮಹಿಳೆಯರ ಪ್ರತೀಕವಾಗಿ ಕಂಡುಬರುತ್ತದೆ. **'ತಡಿಗೆ'**ಯಲ್ಲಿ ಬಚ್ಚಿಟ್ಟ ಬತ್ತವನ್ನು ಪೊಲೀಸರು ವಾಪಸ್ಸು ಪಡೆಯಲು ಬಂದಾಗ ತಮ್ಮ ಸೂಟುಬೂಟುಗಳನ್ನು ಹೊರಗೆ ಬಿಚ್ಚಿಟ್ಟು ನೋಡಿ ಎಂದು ಹೇಳುವ ಮಾತು ಕೂಡ ಹೋರಾಟಕ್ಕೆ ಅಣಿಯಾದ ಸಾಮಾಜಿಕ ಸ್ಥಿತ್ಯಂತರಕ್ಕೆ ಸಾಕ್ಷಿಯಾಗುತ್ತದೆ.

ದಲಿತರು ಬತ್ತಕ್ಕಾಗಿ ಕನಸು ಕಾಣುತ್ತಾ ಸುಗ್ಗಿಯ ಕಾಲದಲ್ಲಿ ಅದರ ಹಿಂದಿನ ದಿವಸ ಆಯುಧಗಳನ್ನು ಸರಿಪಡಿಸಿಕೊಳ್ಳುತ್ತಾ ಬತ್ತವು ನಮಗೆ ದೊರೆಯುತ್ತದೆ ಎಂಬ ಮಹದಾಸೆ ಅವರಲ್ಲಿ ಮೂಡಿರುತ್ತದೆ. ಅಂದರೆ ಅನ್ನವೇ ದಲಿತರ ಪ್ರಪಂಚವಾಗಿರುವುದನ್ನು ಕಾಣಬಹುದಾಗಿದೆ. ಮುಖ್ಯವಾಗಿ 'ಭತ್ತ' ಕುಯ್ಯುವ ಸಂಭ್ರಮವೇ ಅವರಿಗೆ ಹಬ್ಬದ ಆಚರಣೆ ಮಾಡುತ್ತಿದ್ದೇವೆ ಎಂಬ ಭಾವನೆಯನ್ನುಂಟು ಮಾಡುತ್ತದೆ. ಇವೆಲ್ಲವನ್ನೂ ಗ್ರಹಿಸಿದರೆ, ಶೋಷಿತರು ಹೇಗೆ ತಮ್ಮ ಜೀವನವನ್ನು ನಡೆಸುತ್ತಿದ್ದರು ಎಂಬುದನ್ನು ನೋಡುತ್ತೇವೆ. ಕಥೆಯಲ್ಲಿ ದಲಿತರ ಹಸಿವಿನ ಜೊತೆಗೆ ಜಾತಿ ಶೋಷಣೆಯನ್ನು ಪ್ರತಿಪಾದಿಸುತ್ತದೆ.

ಹಸಿವಿನಿಂದ ಕಂಗಾಲಾದ ದಲಿತರು ಅನ್ನ ಉಂಡು ಬಹಳ ವರ್ಷಗಳಾಗಿ, ತಮ್ಮ ದುಡಿಮೆಯ ಮೂಲಕ ಸಿಗಬಹುದಾದ ಭತ್ತದ ಕನಸಿಗಾಗಿ ಕಾಯುವುದು ಅಲ್ಪ ಪ್ರಮಾಣದ ಕಳ್ಳತನದಲ್ಲಿ ಸಂಪಾದಿಸುವ ಪ್ರಯತ್ನ ಮಾಡುವುದು ಅವರ ದಾರಿದ್ರ್ಯದ ಪ್ರತೀಕವಾಗಿದೆ. ಮೇಲ್ಜಾತಿಯವರ ಜಾತಿ ಶೋಷಣೆ ಇದೆ, ತಹಸಿಲ್ದಾರ್ ಕ್ರಮ ಕೈಗೊಂಡದ್ದು ಇಲ್ಲಿ ಜಾತಿ ಬೆಂಬಲದ ಪ್ರತೀಕವಾಗುತ್ತದೆ. ಅದಕ್ಕೆ ವಿರುದ್ಧವಾಗಿ ಜಿಲ್ಲಾಧಿಕಾರಿಯ ದೌರ್ಜನ್ಯ ಮೇಲ್ಜಾತಿಯ ಪರವಾಗಿ ನಿಲ್ಲುವುದು, ವ್ಯವಸ್ಥೆಯು ವ್ಯಂಗ್ಯವಾಗುತ್ತದೆ.

'ಮಾಯಮ್ಮ' ಭತ್ತವನ್ನು ಬೇಯಿಸುವ ನೆಪದಲ್ಲಿ ಅದನ್ನು ಬಚ್ಚಿಟ್ಟುಕೊಳ್ಳುವ ತಂತ್ರಹೂಡುತ್ತಾಳೆ. ಇವುಗಳೆಲ್ಲ ದಲಿತರ ಹೋರಾಟದ ಪ್ರತೀಕವೇ ಆಗಿವೆ. ಅವುಗಳು

ಶೋಷಿತರು ಬದುಕುವ ಚೈತನ್ಯಗಳು, ಈ ರೀತಿಯ ಚೈತನ್ಯ ಶೀಲತೆಯಿಂದಲೇ ದಲಿತರು ಬದುಕಿರುವುದನ್ನು ಕಾಣುತ್ತೇವೆ. ಭತ್ತ ದಲಿತರ ಹಸಿವನ್ನು ಹಿಂಗಿಸುವ ಮಾಯೆಯಾಗಿ ಬಂದು ಬದುಕನ್ನು ಕಷ್ಟಕ್ಕೆ ಸಿಕ್ಕಿಸಿ ವ್ಯವಸ್ಥೆಯ ನಗುವಿಗೆ ಕಾರಣವಾಗುತ್ತದೆ. ಅಧಿಕಾರಶಾಹಿ ವ್ಯವಸ್ಥೆ ಹೇಗೆ ನಡೆದುಕೊಳ್ಳುತ್ತದೋ ಹಾಗೆ ಭೂಮಾಲೀಕ ವ್ಯವಸ್ಥೆ ನಡೆದುಕೊಂಡು ದಲಿತರನ್ನು ಶೋಷಣೆ ಮಾಡುವುದು ಇಲ್ಲಿಯ ದುರಂತವೂ ಆಗುತ್ತದೆ. ಇಲ್ಲೆಲ್ಲ ಸಾಮಾಜಿಕ ಸಂಘರ್ಷ ಎದ್ದು ತೋರುತ್ತದೆ.

**'ಬುಗುರಿ'** ಕತೆಯಲ್ಲಿದ್ದ 'ಚಲುವನ' ಬುಗುರಿ ಕಕ್ಕಸ್ಸು ಗುಂಡಿಗೆ ಬೀಳುವುದರ ಮೂಲಕ ದಲಿತ ಕೇರಿಯ ಜನ ಜೀವನದ ಏಳುಬೀಳುಗಳನ್ನು ಕಕ್ಕಸ್ಸಿನಲ್ಲಿ ಬಿದ್ದ ಹಂದಿಯನ್ನು ತೊಳೆದು ತಿನ್ನುವ ಇವರು ತಮ್ಮ ಮೂಲ ಪರಂಪರೆ ಆಚರಣೆಯನ್ನು ಮತ್ತು ಕೆಳವರ್ಗದ ಜನರು ಬದುಕುವಂತಹ ಹೀನಾಯ ಸ್ಥಿತಿಯನ್ನು ಸೂಚಿಸುತ್ತದೆ. ಕಥೆಯಲ್ಲಿ ಎರಡು ಮುಖ್ಯ ಘಟನೆಗಳು ನಡೆಯುತ್ತವೆ. ಇವೆರಡೂ ಕತೆಯ ಕೇಂದ್ರದಲ್ಲಿರುವ ಕಕ್ಕಸ್ಸು ಗುಂಡಿಗೆ ಸಂಬಂಧಿಸಿದವುಗಳು, ಮೊದಲಿನದರಲ್ಲಿ ಚಲುವನ ಪ್ರೀತಿಯ ಬುಗುರಿ ಅವನಪ್ಪನ ಕ್ರೌರ್ಯ, ಅಸಹನೆಗಳಿಂದಾಗಿ ಕಕ್ಕಸ್ಸು ಗುಂಡಿಯನ್ನು ಸೇರುತ್ತದೆ.

ಎರಡನೆಯದರಲ್ಲಿ ನಾಯಿಗಳು ಅಟ್ಟಿಸಿಕೊಂಡು ಬಂದ ಹಂದಿಯೊಂದು ದಿಕ್ಕೆಟ್ಟು ಇದೇ ಗುಂಡಿಯಲ್ಲಿ ಬಿದ್ದಿರುತ್ತದೆ. ಹೊಲಗೇರಿಯ ವ್ಯವಸ್ಥೆಗೆ ಹೊರತಾದ ಈ ಕಕ್ಕಸು ಗುಂಡಿಯ ಸುತ್ತ ಈ ಕತೆಯ ಘಟನೆಗಳು ನಡೆಯುವ ಮೊದಲೇ ಇತಿಹಾಸವೊಂದು ಬೆಳೆದುಕೊಂಡುಬಿಟ್ಟಿರುತ್ತದೆ. ಪೂಜಾರಿ ಗುಂಜಾರಯ್ಯನ ಕಿರಿಯ ಮಗ ಶಾಂತರಾಜನಿಗೆ ಮೈಸೂರಿನಿಂದ ಹೆಣ್ಣು ತಂದಾಗ ನಗರ ಜೀವನಕ್ಕೆ ಒಗ್ಗಿಕೊಂಡ ನೆಂಟರ ಅನುಕೂಲಕ್ಕೆಂದು ಕಟ್ಟಿದ ಆಧುನಿಕ ಕಕ್ಕಸು ಮನೆಯ ಕಕ್ಕಸೆಲ್ಲ ಸಂಗ್ರಹವಾಗಿ ಈ ಕಕ್ಕಸು ಗುಂಡಿ ನಿರ್ಮಾಣವಾಗಿರುತ್ತದೆ. ಮದುವೆಯ ದಿನವೇ ಹೆಣ್ಣಿನ ಕಡೆಯವನೊಬ್ಬ ಕಳ್ಳ ಲೈಂಗಿಕ ಸಂಬಂಧ ಬೆಳೆಸಲು ಹೋಗಿ ಗುಂಡಿಯಲ್ಲಿ ಸಿಕ್ಕಿಬಿದ್ದು ನಗೆಗೀಡಾದ ಪ್ರಸಂಗ ನಡೆದುಹೋಗಿರುತ್ತದೆ. ಅಂದರೆ ಆಧುನಿಕತೆಗೆ ಮುಗಿಬಿದ್ದು ಅರಿಯದೆ ಅವಘಡಕ್ಕೆ ತುತ್ತಾಗುವುದು, ಮೂಲ ಪರಂಪರೆಯನ್ನು ಸರಿಸುವ ಸನ್ನಿವೇಶಗಳು ಕಥೆಯಲ್ಲಿ ಕಂಡುಬರುತ್ತವೆ. ಹಾಗೆಯೇ ತಿಪ್ಪೇಗೌಡನ ಕೋಣವೂ ಸೇರಿದಂತೆ ಹಲವಾರು ಪ್ರಾಣಿಗಳು ಅದರಲ್ಲಿ ಬಿದ್ದು ಪ್ರಾಣಬಿಟ್ಟಿರುತ್ತವೆ. ಗುಂಡಿ ಒಬ್ಬೊಬ್ಬರಿಗೆ ಒಂದೊಂದು ತರ ಕಾಣುತ್ತದೆ, 'ಸಾಧ್ವಿತನದ' ಗುಂಜಾರಯ್ಯನಿಗೆ ಅದೊಂದು 'ನರಕ' ಚಿಕ್ಕಣ್ಣನಿಗೆ ಲಾಭದಾಯಕವಾದ ಖೆಡ್ಡಾ ಹೊಲಗೇರಿಯವರಿಗೆ ಒಂದು ಗಂಡಾಂತರದ ಸ್ಥಳ. ಅದನ್ನು ಮುಚ್ಚಬೇಕೆಂದು

ಊರವರೆಲ್ಲರೂ ಹೇಳಿದ್ದರೂ ಕಲ್ಲು ಅಥವಾ ತಗಡುಗಳನ್ನು ಕೊಳ್ಳಲು ತ್ರಾಣವಿಲ್ಲದ ಗುಂಜಾರಯ್ಯ ಅದನ್ನು ತೆಂಗಿನ ಗರಿಗಳಿಂದ ಮಾತ್ರ ಮುಚ್ಚಿರುತ್ತಾನೆ.

ಬುಗುರಿ ಕಕ್ಕಸು ಗುಂಡಿಯಲ್ಲಿ ಬಿದ್ದಿದ್ದು, ಚಲುವನ ದೃಷ್ಟಿಯಲ್ಲಿ ಒಂದು ದುರಂತವಾಗಿದ್ದರೂ ಅದರಲ್ಲಿ ಉಳಿದವರಾರಿಗೂ ಆಸ್ಥೆಯಿರುವುದಿಲ್ಲ, ಆದರೆ ಹಂದಿ ಅದರಲ್ಲಿ ಬಿದ್ದಿದ್ದು ಮಾತ್ರ ಹೊಲಗೇರಿಯ ಇತಿಹಾಸದಲ್ಲಿಯೇ ಮಹತ್ವದ ಘಟನೆಯ ಸ್ವರೂಪವನ್ನು ತಾಳುತ್ತದೆ. ಗುಂಜರಯ್ಯನ ಮನೆಯ ಹೆಂಗಸರಿಗೆ ಇದೊಂದು ಕೇಡಿನ ಸೂಚನೆಯಾಗಿ ಗೋಚರಿಸುತ್ತದೆ. ವರಾಹ ಅವತಾರದ ವಿಷ್ಣುವಿನಿಂದ ನಡೆದ ರಾಕ್ಷಸ ಸಂಹಾರದ ನೆನಪು ತಂದು ಕೊಡುವ ಸಂಕೇತ. ಇದೊಂದು ಅವರ ಪರಂಪರೆಯ ನಂಬಿಕೆಯೂ ಆಗಿರುತ್ತದೆ.

ಇದನ್ನೆಲ್ಲ ನೊಡುತ್ತಿದ್ದ ಗುಂಜಾರಯ್ಯನಿಗೆ ಊರ ಪೂಜಾರಿಯೇ ಅಪವಿತ್ರವಾದಂತೆನಿಸುತ್ತದೆ. ಹಾಗೆ ಹಂದಿಯನ್ನು ಕಳಕೊಂಡ ಅಸಹಾಯಕ ಕುಂಟಣ್ಣನ ಬಗ್ಗೆ ಅಪಾರವಾದ ಗುಣಗಾನವಿರುತ್ತದೆ. ಆದರೆ ಈ ಎಲ್ಲ ಭಾವನೆಗಳನ್ನು ಮೀರಿದ ಭಾವನೆ ಭಯ, ರಾತ್ರಿಯ ಕತ್ತಲಲ್ಲಿ ಹಂದಿ ಪಿಶಾಚಿಯಾಗಿ ಅಪ್ಪನ ರೂಪವನ್ನೇ ಕಳೆದು, ಒಂದು ಕೈಯಲ್ಲಿ ಬುಗುರಿ ಇನ್ನೊಂದು ಕೈಯಲ್ಲಿ ಚಾಕು ಹಿಡಿದು ಎಲ್ಲರ ತಲೆಗಳೊಳಗೂ ತೂತು ಕೊರೆದು ಅದರಲ್ಲಿ ಹೇಲು ತುಂಬುವಂತೆ ಕಾಣಿಸಿಕೊಂಡು ಚಲುವನನ್ನು ಅಂಜಿಸುತ್ತದೆ. ಹೆದರಿಕೊಂಡ ಚಲುವ ಅಜ್ಜಿಯ ಸೀರೆಯಲ್ಲಿ ಉಚ್ಚೆ ಹೊಯ್ದುಕೊಳ್ಳುತ್ತಾನೆ.

ಹೀಗೆ ಗ್ರಾಮೀಣ ಜೀವನದ ವಿಚಾರ ಚಿಕ್ಕದಾದರು ಅದು ಅಜ್ಞಾನದಿಂದ ದೀರ್ಘಕಾಲ ಕೋಪ ತಾಪಕ್ಕೆ ಬಲಿಯಾಗುವುದು ಅವಘಡಕ್ಕೆ ಸಿಲುಕುವುದು ಇನ್ನೂ ಹಲವಾರು ಸ್ಥಿತಿಗತಿಗೆ ತುತ್ತಾಗುವುದನ್ನು ಕಾಣುತ್ತೇವೆ. ಅಂದರೆ 'ಬುಗುರಿ' ಹಾಗೂ 'ಒಂದು ಹಳೇ ಚಡ್ಡಿ'ಗಳಲ್ಲಿ ಮೊಗಳ್ಳಿಯವರು ಒಂದೇ ಕತೆಯನ್ನು ಹೇಳುತ್ತಿರುವಂತೆ ಭಾಸವಾಗುತ್ತದೆ ಎಂದು ಜಿ.ಎಸ್.ಆಮೂರ ಅವರ ಹೇಳಿಕೆ ಹೀಗಿದೆ: ಒಂದು ಹಳೆಯ ಚಡ್ಡಿ ಕತೆಯ ಸೀನಿಯ ಚಡ್ಡಿ ಕಳೆದುಹೋದುದೇ ಒಂದು ನೆಪವಾಗಿ ಇಲ್ಲಿ ಹದಗೆಟ್ಟ ಕೌಟುಂಬಿಕ ಸಂಬಂಧಗಳು ತೆರೆದುಕೊಳ್ಳುತ್ತವೆ.

ನಾಗರಾಜನ ಕ್ರೌರ್ಯ, ಅಸೂಯೆಗಳ ಅವನ ಮೂರನೆಯ ಹೆಂಡತಿ ಸಿದ್ದಿಯ ಗೋಳು, ಅವನ ಎಂಬತ್ತು ವರ್ಷ ವಯಸ್ಸಿನ ತಂದೆಯ ಹತಾಶೆ, ಇವೆಲ್ಲವುಗಳ ನಡುವೆ ಸಿಕ್ಕು ಅದೇ ಮದುವೆಯಾದ ಶಾಂತಿ ಅನುಭವಿಸುವ ಅವಮಾನ, ಕೊನೆಗೆ ಅಪಘಾತವೊಂದರಲ್ಲಿ ಸೀನಿಯ ಸಾವು ಇವೆಲ್ಲವೂ ಒಟ್ಟಾಗಿ ಕಥೆಯಲ್ಲಿ ಯಾತನೆಯ ಒಂದು ಶಿಬಿರವನ್ನೇ ನಿರ್ಮಿಸಿಬಿಡುತ್ತದೆ.

ಹಾಗೆಯೇ 'ನನ್ನಜ್ಜನಿಗೊಂದಾಸೆಯಿತ್ತು' ಕತೆಯ ನಿವೇದಕ ತನ್ನ ಕುಟುಂಬದವರನ್ನು ಕುರಿತು ಹೇಳುವ ಮಾತು "ಇಷ್ಟೆಲ್ಲವೂ ಆಗಿದ್ದರೂ ವಿಷಾದವೆಂದರೆ ಮನೆಯ ಯಾರಿಗೂ ಕೂಡ ನೀರಸ ಬುದಕಿನ ದುಃಖಾಂತಗಳಿಗೆ ಕಾರಣಗಳಾಗಲೀ ಹೊಸ ಹಾದಿಗಳಾಗಲಿ ಕೊಂಚವು ತಿಳಿದಿರಲಿಲ್ಲ"[7] ಬುಗುರಿ ಮತ್ತು 'ಹಳೆಚಡ್ಡಿ'ಗಳ ಮನುಷ್ಯರ ಬಗೆಗೂ ಹೇಳಬಹುದಾಗಿದೆ.

**'ಒಂದು ಹಳೇ ಚಡ್ಡಿ'** ಎಂಬ ಕತೆಗೆ ಪೂರಕವಾಗಿ ಗ್ರಹಿಸಿದರೆ ದೇವನೂರು ಮಹಾದೇವ ಅವರ ಕಥೆಯಾದ 'ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ ಕಥೆಯಲ್ಲಿ ರಂಗಪ್ಪನ ಮಗರಾಜ ಶಾಲೆಗೆ ಹೋಗುವ ಹುಡುಗ. ಆತನಲ್ಲಿ ವಿದ್ಯೆಯಿಂದ ಪ್ರಜ್ಞೆ ಬೆಳೆಯುತ್ತಾ ಸ್ವಾಭಿಮಾನಕ್ಕೆ ಎಡೆ ಮಾಡಿಕೊಡುತ್ತದೆ. ಆದ್ದರಿಂದಲೇ ರಾಜನಿಗೆ ತಾನು ತೊಟ್ಟುಕೊಳ್ಳುವ ಚಡ್ಡಿ ಮುಖ್ಯವಾಗುತ್ತದೆ. ತಾಯಿಯ ಹತ್ತಿರ ಚಡ್ಡಿಗಾಗಿ ಚಡ್ಡಿ ಹಾಕಿಸಲು ಹಠ ಮಾಡುವುದನ್ನು ಕಂಡರೆ ಕಥೆಗಳಲ್ಲಿ ಹತ್ತಿರವಾದ ಸಾಮ್ಯತೆ ಕಾಣುತ್ತೇವೆ.

**'ನನ್ನಜ್ಜನಿಗೊಂದಾಸೆಯಿತ್ತು'** ಈ ಎರಡೂ ಕಥೆಗಳಿಂದ ಬೇರೆಯಾಗಿರುವುದಕ್ಕೆ ಕಾರಣ ಈ ಕಥೆಯ ನಿವೇದಕ ಹೊಂದಿದ ಪರಿಪ್ರೇಕ್ಷ್ಯ, ವಿದ್ಯಾಭ್ಯಾಸದಿಂದ ಒದಗಿದ ಈ ಪರಿಪೇಕ್ಷದ ಮೂಲಕ ಅವನು ತನ್ನ ಕುಟುಂಬದ ವಿಘಟನೆ ಹಾಗೂ ಅವಸಾನಗಳ ಪ್ರಕ್ರಿಯೆಯನ್ನು ಅರ್ಥೈಸಬಲ್ಲವನಾಗಿದ್ದಾನೆ. ಕಥೆಯಲ್ಲಿ ಅಜ್ಜ ಮತ್ತು ಅವನು ನಂಬಿರುವ ಕಂಚಿನ ತಣಿಗೆ ದಲಿತ ಸಮುದಾಯದ ಸಮಷ್ಟಿಯ ಸಂಕೇತವಾಗಿದ್ದಾರೆ. ನಿವೇದಕ ಹೇಳುವ ಹಾಗೆ ತಣಿಗೆ ದಿನೇ ದಿನೇ ಒಂದೊಂದು ರೂಪ ತೊಟ್ಟು ಒಂದು ದೊಡ್ಡ ಸಾಂಸ್ಕೃತಿಕ ಘಟಕವಾಗಿ, ಭಾವನಾತ್ಮಕ ಸಂಬಂಧವಾಗಿ ಇಡೀ ಕೇರಿಯ ಒಂದು ಪ್ರಜ್ಞೆಯಾಗಿಯೂ ಎಲ್ಲ ಸತ್ಯಗಳ ಸಂಕೇತವಾಗಿಯೂ ಬೆಳೆದುಬಿಟ್ಟಿತ್ತು.

ಆದರೆ ಕತೆ ಮುಗಿಯುವ ವೇಳೆಗೆ ಈ ತಣಿಗೆ ಗೌಡನ ಮನೆಸೇರಿ ಅವನ ಮನೆಯ ಹಂಡೆಯ ಒಂದು ಭಾಗವಾಗಿ ಬಿಡುತ್ತದೆ. ತನ್ನ ಕೊನೆಯ ಆಸೆಯಾಗಿ ಈ ತಣಿಗೆಯನ್ನು ಅಜ್ಜ ಬೇಡಿದಾಗ ಅವನು ಹಾಸ್ಯದ ವಿಷಯವಾಗಿ ಬಿಡುತ್ತಾನೆ. "ಅವನ ಕೊನೆಯ ಆಸೆಯನ್ನು ಕೇಳಿಸಿಕೊಂಡ ಎಲ್ಲರೂ ಮನೆಯ ಹೆಂಚುಗಳು ಹಾರಿಹೋಗುವ ಹಾಗೆ ಭೀಕರವಾಗಿ ನಕ್ಕುಬಿಟ್ಟರು. ಎಲ್ಲರೂ ಇನ್ನೂ ನಗುತ್ತಲೆ ಇದ್ದರು. ಸಾಯುವವನ ಕೊನೆಯ ವಿಚಿತ್ರ ಬಯಕೆಗೆ ನಮ್ಮ ಮನೆ ಅಷ್ಟೇ ವಿಚಿತ್ರವಾಗಿ ಪ್ರತಿಕ್ರಿಯಿಸಿತ್ತು"[8]

ಅಜ್ಜನೊಡನೆ ಅವನು ಸಂಕೇತಿಸುವ ಸಮಷ್ಟಿ ಪ್ರಜ್ಞೆಯೂ ಅಳಿದುಹೋಗುವುದು ಈ ಕತೆಯ ವಿಶಿಷ್ಟ ದರ್ಶನವಾಗಿದೆ ಎಂದು ನಿರೂಪಕರು ಅನಾವರಣ ಮಾಡುತ್ತಾರೆ. ಕೊನೆಗೂ

ನಿವೇದಕರು ನೆನೆಯುವುದು 'ಅಜ್ಜ' ಹೇಳುವ ಮಾತು ಅಂಬೇಡ್ಕರ್ ತರಹದ ಸೂಟುಬೂಟುಗಳನ್ನು ತೊಟ್ಟು ಬದುಕಬೇಕೆಂಬ ಕನಸುಗಳನ್ನು ಮೊಮ್ಮಕ್ಕಳಿಗೆ ಬಿತ್ತುತ್ತಾನೆ.

ಇಂತಹ ಸನ್ನಿವೇಶಗಳು ದಲಿತಕೇರಿಯ ಸಂಸ್ಕೃತಿಯನ್ನು ಬಿಂಬಿಸುವುದಲ್ಲದೆ, ಮೂಲ ನೆಲೆಯನ್ನು ಮತ್ತು ನವೀಕರಣಕ್ಕೆ ಹೋಗುತ್ತಿರುವುದನ್ನು ಕಥೆ ತೋರ್ಪಡಿಸುತ್ತದೆ. ಕಥೆ ಮುಕ್ತಾಯದಲ್ಲಿ 'ತಣಿಗೆ' ಒಂದು ಕೇವಲ ವಸ್ತುವಾಗದೆ ಜನರ ನಂಬಿಕೆಯ ಕೇಂದ್ರಬಿಂದು ಎನ್ನುವ ಮುಖಾಂತರ ಕಥೆ ಅಂತ್ಯಗೊಳ್ಳುತ್ತದೆ.

**'ಕಾಳಿ'** ಕಥೆಯಲ್ಲಿ ನಿವೇದಕರ ತನ್ನ ಬಗ್ಗೆ ಹೇಳುವುದನ್ನು ಗಮನಿಸಬಹುದು, ಇದನ್ನೆಲ್ಲ ಈಗ ನಾಚಿಕೆಯಿಂದ ಹಾಗೆಯೇ ಹೆಮ್ಮೆಯಿಂದ ನೆನಸಿಕೊಳ್ಳುತ್ತಿರುವುದರ ಹಿಂದೆ ಯಾವುದೋ ಅವ್ಯಕ್ತ ಸಂಕಟ ಇದೆ. ಬೆಲೆಯುತ್ತಿರುವಂತೆಯೇ ಬಡುದಿಂದ ದೂರವಾಗುವ ಬುದ್ದಿಯನ್ನು ಯಾರಿಂದ ಹೇಗೆ ಯಾವಾಗ ಎಲ್ಲಿ ಕಲಿತೆನೋ ನನಗೆ ಗೊತ್ತಾಗಲಿಲ್ಲ ತಾನು ಆತ್ಯಂತಿಕವಾಗಿ ಪ್ರೀತಿಸುವ ಹಾಗೂ ಗೌರವಿಸುವ ಕಾಳಿಯ ಜೊತೆ 'ರಂಪ' ಮಾಡಿ, ಬೈಯ್ದು ಹೊಡೆದು ಬಂದಿದ್ದು ಘಟನೆಯನ್ನು ಅವರು ಮರೆಯುವುದೇ ಸಾಧ್ಯವಿಲ್ಲ ಎಂದು ವ್ಯಕ್ತಪಡಿಸುತ್ತಾರೆ.

ಕಥೆಯಲ್ಲಿ 'ಕಾಳಿ'ಯು ಉಳ್ಳವರ ಮನೆಯಲ್ಲಿ ಜೀತ, ಕೂಲಿ ಕಾಯಕವನ್ನು ಮಾಡಿಕೊಂಡು, ಅವರು ಕೊಟ್ಟ ತಂಗಳು ಅನ್ನದಿಂದ ತನ್ನ ಕುಟುಂಬದ ಹಸಿವನ್ನು ನೀಗಿಸುತ್ತಿದ್ದಳು. ಅಂದರೆ ಕಾಳಿ ಕಸ ಸುರಿದ ಮೇಲೆ ತಂಗಳು ಕೊಡಿ ಎಂದು ಆಕೆ ಕೇಳುತ್ತಲೂ ಇರಲಿಲ್ಲ. ಎಷ್ಟೋ ಜನ ಕೆಲಸ ಮಾಡಿದರೂ ತಂಗಳನ್ನು ಕೊಡುತ್ತಿರಲಿಲ್ಲ. 'ಮಾರ್ಲಮಿ' ಹಬ್ಬದಂದು ಅಳಿದುಳಿದ ಗೊಜ್ಜು, ಪಲ್ಯ, ತಾಳ್ದ, ಪಾಯಸ, ಅನ್ನ ಹಿಟ್ಟು, ಇವುಗಳನ್ನು ಹಿಂದೆ ಯಾವಾಗಲೋ ಕೊಟ್ಟಿದ್ದಕ್ಕೆ ಲೆಕ್ಕ ಹಾಕಿಸಿಕೊಂಡು ಹೋಗಿ ಎನ್ನುತ್ತಿದ್ದರು.

ಕಾಳಿ ಕೆಲಸದಲ್ಲಿ ಹೆಚ್ಚು ಏಕಾಗ್ರತೆಯನ್ನು ವಹಿಸಿದಷ್ಟು ಗಮನಿಸಿದ್ದರೆ ದಲಿತರು ನಿಯತ್ತಿಗೆ ಪಾತ್ರರಾಗಿರುವುದನ್ನು ಕಾಣುತ್ತೇವೆ. ಮೇಲ್ಜಾತಿಯವರಿಗೆ ಭಕ್ತಿಯಿಂದ ಕೈ ಮುಗಿಯಬೇಕೆಂದು ಕಾಳಿ ತನ್ನ ಮಕ್ಕಳಿಗೆ ಹೇಳುವಾಗ ಮಕ್ಕಳು ವಿನಯವಾಗಿ ಪಾಲಿಸುತ್ತಿದ್ದರು. ದೊಡ್ಡವರ ಮನೆಗಳು ತಿಥಿ ದಿನಗಳಲ್ಲಂತೂ ನಮ್ಮ ಕೇರಿಯ ದಾರಿದ್ರ್ಯವೇ ಧ್ವಂಸವಾಗಿಬಿಡುತ್ತಿತ್ತು ಎಂದು ಕತೆಗಾರರು ನೆನಪಿಸಿಕೊಳ್ಳುತ್ತಾರೆ.

ಹಾಗೆ ತೀರ ಬರಗಾಲ ಬಂತು ಎಂದರೆ ನಾವು ಅವಳ ಜೊತೆ ಯಾವುದಕ್ಕೂ ಸಿದ್ಧವಾಗುತ್ತಿದ್ದೆವು. ಊರಲ್ಲಿ ದನಕುರಿ, ಎಮ್ಮೆ ಸಾಯಿತೆಂದರೆ ಕಾಳಿಯಿಂದಲೇ ಅವುಗಳ

ಅಂತ್ಯಸಂಸ್ಕಾರವಾಗುತ್ತಿತ್ತು. ಕೇರಿಯ ಇನ್ನಿಬ್ಬರ ಜೊತೆ ಕಾಳಿ ನನ್ನನ್ನೂ ಕರೆದುಕೊಂಡು ಸತ್ತ ಪ್ರಾಣಿಯ ಬಳಿ ಹೋಗುತ್ತಿದ್ದಳು. ಸಂಸ್ಕಾರವೆಂದರೆ ಆ ಪ್ರಾಣಿಯನ್ನು ಅಷ್ಟು ದೂರದವರೆಗೆ ಎಳೆದುಕೊಂಡು ಹೋಗಿ ಅದರ ತನಿಯಾದ ಮಾಂಸದ ಭಾಗಗಳನ್ನು ಪಡೆದು ಉಳಿದ ಭಾಗವನ್ನು ಹದ್ದು, ಕಾಗೆ, ನಾಯಿಗಳಿಗೂ ಹಂಚುವುದೇ ಆಗಿತ್ತು.

ಕತೆಯಲ್ಲಿನ ಹುಡುಗ ಹಸಿವನ್ನೂ ನೀಗಿಸಿಕೊಳ್ಳಲು, ನಾಲ್ಕಾರು ಮನೆಯ ತಂಗಳು ಅನ್ನ, ಮಾಂಸದ ತುಂಡಿಗಾಗಿ ಶಾಲೆಯನ್ನು ಬಿಟ್ಟು ಜೀತಕ್ಕೆ ಸೇರಲು ಪ್ರಯತ್ನಿಸುತ್ತಾನೆ. ಆದರೆ ದೊಡ್ಡವರ ಮನೆಯಲ್ಲಿ ಜೀತಗಾರನ ಕೊಲೆಯ ಭೀಕರ ದೃಶ್ಯವನ್ನು ಕಂಡು ಮರಳಿ ಶಾಲೆಗೆ ಹೋಗುತ್ತಾನೆ. ಮುಂದುವರೆದಂತೆ ಕಾಳಿಗೆ 'ಕಸದ ಮಾರಿ' ಎಂದು ಗ್ರಾಮಸ್ಥರು ಬಿರುದು ಕೊಡುವುದರ ಮೂಲಕ ಕಥೆ ಮುಕ್ತಾಯಗೊಳ್ಳುತ್ತದೆ.

ಮೊಗಳ್ಳಿಯವರ ಕಥೆಗಳಲ್ಲಿ ಮಾದೇವಿ, ಸಾಕಿ, ಅತ್ತೆ, ಸಾಕಕ್ಕ, ಕೆಂಪಿ, ಸಾವಿತ್ರಿ, ಇಂದಿರೆ, ಹನುಮಿ, ಸಿದ್ದಿ, ಎಂಬ ಸ್ತ್ರೀ ಪಾತ್ರಗಳ ಮೂಲಕ ಗ್ರಾಮೀಣ ಜೀವನದ ಮೂಲ ನೆಲೆಗಳು ವ್ಯಕ್ತಗೊಂಡಿವೆ. ದಲಿತ ಮಹಿಳೆಯರು ಒಂದಿಲ್ಲೊಂದು ಕಾರಣಕ್ಕಾಗಿ ಅತ್ಯಾಚಾರಕ್ಕೆ ಒಳಗಾಗಿ ಅವರ ಬದುಕು ನೇಪಥ್ಯಕ್ಕೆ ಸರಿಸುವ ನಿಟ್ಟಿನಲ್ಲಿ ಗ್ರಾಮೀಣ ಜೀವನದ ಮತ್ತೊಂದು ಮಗ್ಗಲು ತೆರೆದುಕೊಳ್ಳುತ್ತದೆ.

ಕಿತ್ತು ತಿನ್ನುವ ಬಡತನದಲ್ಲಿ, ಕೂಲಿಕಂಬಳಕ್ಕಾಗಿ ಉಳ್ಳವರ ಹೊಲಮನೆಯಲ್ಲಿ ಕೆಲಸ ಮಾಡುವ ಮುಖಾಂತರ ಅವರ ಅಡಿಯಾಳಾಗಿ ಅವರ ದಬ್ಬಾಳಿಕೆಗೆ ಒಳಗಾಗಿ, ಒಂದಲ್ಲ ಒಂದು ರೀತಿಯಲ್ಲಿ ನೋವು, ಹತಾಶೆಗೆ ಒಳಗಾಗಿ ಬದುಕನ್ನು ಕಟ್ಟಿಕೊಳ್ಳುವ ಪ್ರಕ್ರಿಯೆ ಗಮನಾರ್ಹವಾದುದು. ಇಂತಹ ಅಂಶಗಳನ್ನು ಗಮನಿಸಿದರೆ ಪುರುಷರಂತೆಯೇ ತಾವು ಕೂಡ ಸಮಾನರೆಂಬ ಆಲೋಚನೆಯಲ್ಲಿ ಬದುಕನ್ನು ಸವೆಸುವಂತ ದಾರುಣಮಯವಾದ ಸಂದರ್ಭಗಳು ಕತೆಯುದ್ದಕ್ಕೂ ಎದುರಾಗುತ್ತವೆ.

ಈ ಸಂದರ್ಭಗಳನ್ನು ಗಮನಿಸಿದರೆ, ಗ್ರೀಕ್ ದಾರ್ಶನಿಕನಾದ ಅರಿಸ್ಟಾಟಲ್ ಹೇಳುತ್ತಾನೆ. "ಹೆಣ್ಣು ತನ್ನಲ್ಲಿರುವ ಕೆಲವು ಕೊರತೆಗಳಿಂದಾಗಿ ಹೆಣ್ಣಾಗಿದ್ದಾಳೆ; ಮತ್ತು ಹೆಣ್ಣಿನ ಸ್ವಭಾವವು ಕೆಲವು ನಿಸರ್ಗದತ್ತ ಮಿತಿಗಳಿಂದ ರೂಪಿಸಲ್ಪಟ್ಟಿದೆ."[3] ಹೆಣ್ಣಿಗಿರುವಂತೆ ಗಂಡಿಗೂ ವಿಶಿಷ್ಟ ದೈಹಿಕ ಅಂಗಗಳಿವೆಯೆಂದು, ದೈಹಿಕ ಮಿತಿಗಳಿವೆಯೆಂದು ಪುರುಷನಿಗೆ ತೋಚುವುದೇ ಇಲ್ಲ ಎಂದು ಅವರ ಹೇಳಿಕೆಯು ಈ ಕಥೆಗಳ ಸ್ತ್ರೀ ಪಾತ್ರ ಚಿತ್ರಣಕ್ಕೆ ಸಾಮ್ಯತೆ ಇರುವುದು ಎದ್ದು ತೋರುತ್ತದೆ.

**'ಭೂಮಿ'** ಕಥಾಸಂಕಲನ ಮೊಗಳ್ಳಿಯವರ ಮೊದಲ ಎರಡು ಕಥಾ ಸಂಕಲನಗಿಂತ ಈ ಕತಾಸಂಕಲನದಲ್ಲಿ 'ಭೂಮಿ' ಕಥೆಯು ಮಹತ್ವಪೂರ್ಣವಾದ ಅಂಶಗಳಲ್ಲಿ ಭಿನ್ನವಾಗಿರುವುದನ್ನು ಕಾಣುತ್ತೇವೆ. ಇಲ್ಲಿಯು ಕೂಡ ಕತೆಗಾರರು ತಮ್ಮ ಸೃಜನ ಶೀಲತೆ ದಲಿತ ನೆಲೆಯಲ್ಲಿಯೇ ತನ್ನದೇ ಆದ ಸ್ವರೂಪವನ್ನು ಪಡೆದುಕೊಳ್ಳುತ್ತಿದೆಯಾದರೂ, ಅವರ ಆಸೆಗಳ ವ್ಯಾಪ್ತಿ ದಲಿತ ಸಮುದಾಯಕ್ಕೆ ಮಾತ್ರ ಸೀಮಿತವಾಗಿಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಇದರ ಪರಿಣಾಮವಾಗಿಯೋ ಏನೋ ಅವರ ಭಾಷೆ ಕೂಡ ತನ್ನ ಅತಿ ವಿಶಿಷ್ಟತೆಯನ್ನು ಬಿಟ್ಟುಕೊಟ್ಟು ಹೆಚ್ಚು ಸಾಮಾಜಿಕವಾಗಿದೆ, ಬಹುಶಃ ಈ ಬೆಳವಣಿಗೆಗಳು ದಲಿತ ಸಾಹಿತ್ಯದ ಸ್ಥಿತ್ಯಂತರಗಳ ಲಕ್ಷಣವಾಗಿರಬಹುದು. "ಜಿ.ಎಸ್. ಆಮೂರ ಅವರು ಹೇಳುವಂತೆ 'ಭೂಮಿ' ಕಥೆ ಮೊಗಳ್ಳಿಯವರ ಯಶಸ್ವೀ ಕಥೆಗಳಲ್ಲೊಂದು , ಈ ಕಥೆಯಲ್ಲಿ ಅವರ ಸಾಧಿಸಿದ ಕಲ್ಪಕಥೆ, ಕಲಾತ್ಮಕಥೆ ಹಾಗೂ ಸಂಯಮಗಳು ಶ್ರೇಷ್ಠ ಮಟ್ಟದ್ದವಾಗಿದೆ.."[೪] ಆಕಾಶಕ್ಕೆ ಹಾರುವ ಶಕ್ತಿಯನ್ನು ದೊರಕಿಸುವ ಒಬ್ಬ ಆ ಸಾಮಾನ್ಯ 'ದೊಂಬ' ಪಾಳೆಯಗಾನೊಬ್ಬನ ಸವಾಲನ್ನು ಎದುರಿಸಿ ಯಶಸ್ವಿಯಾಗುವ ಕ್ರಿಯೆ ಈ ಕತೆಗೆ ಆಕೃತಿಯನ್ನೊದಗಿಸಿದೆ.

ಈ ಕತೆಯ ನಾಯಕ ಒಬ್ಬ ದೊಂಬನಾಗಿರುವುದು ಹಾಗೂ ಅವನ ಎದುರಾಳಿ ಪಾಳೆಯಗಾರನಾಗಿರುವುದು ಕತೆಗಿರುವ ಸಾಮಾಜಿಕ ಹಾಗೂ ರಾಜಕೀಯ ಆಯಾಮದ ಸೂಚನೆಯಾಗಿದೆ. ದೊಂಬ ಶಿಖರದ ತುದಿಯಿಂದ ಹಾರಬೇಕು ಎನ್ನುವ ಪಾಳೇಯಗಾರನ ಷರತ್ತು ದುರುದ್ದೇಶದಿಂದ ಕೂಡಿದ್ದರೆ, ತನು ಆವರಿಸಿಕೊಳ್ಳುವ ಭೂಮಿಯೆಲ್ಲ ತನ್ನ ಸಮುದಾಯಕ್ಕೆ ಸೇರಬೇಕು ಎಂಬ ದೊಂಬನ ಷರತ್ತಿಗೆ ಲೋಕ ಕಲ್ಯಾಣದ ಗುರಿಯಿದೆ. ನಿರೀಕ್ಷಿಸಿದಂತೆ ಪಾಳೆಯಗಾರನಿಂದ ಮೋಸ ನಡೆಯುತ್ತದೆ ಹಾಗೂ ಈ ಗುರಿಯ ಸಾಧನೆಗಾಗಿ ದೊಂಬ ತನ್ನ ಪ್ರಾಣ ಕಳೆದುಕೊಳ್ಳಬೇಕಾಗುತ್ತದೆ, ಆದರೆ ದೊಂಬನ ಹೆಂಡತಿಯ ಶಾಪ ಕತೆಗೆ ಅನಿರೀಕ್ಷಿತ ತಿರುವು ಕೊಡುತ್ತದೆ.

"ಆ ಮೇಲೆ ಎಷ್ಟೋ ವರ್ಷಗಳು ಜಾತಿ ತೂರಿ ಹೋದವು ದೊಂಬ ದೇಹ ಬೆಳೆದು ಸಾವಿರಾರು ಹೂವಾಗಿ, ಮೊಗ್ಗಾಗಿ, ಗಿಡಮರ, ಬಳ್ಳಿ, ಬೀಜವಾಗಿ, ಮರವಗಿ ಪಚ್ಚೆ ಪೈರು ಹಸುರು ಸಿರಿಯಾಗಿ, ಹೂ ಹಣ್ಣು ಮಣ್ಣು ಗಂಧವಾಗಿ, ಬೀಜ ಜೀವವಾಗಿ ಇಡೀ ಆ ಬಯಲೆಲ್ಲವನ್ನೂ ರಂಗುಗೊಳಿಸುವಂತೆ ರಂಗೊಳಿಸಿ ಬೆಳೆದುಹೋಗಿತ್ತು".[೫] ಹೀಗೆ ಕಥೆ ದೊಂಬನ ಸಾವಿನೊಂದಿಗೆ ಮುಕ್ತಾಯಗೊಳ್ಳುತ್ತದೆ.

ಕತೆಗಳಲ್ಲಿ ಎದ್ದು ಕಾಣುವ ವೈಶಿಷ್ಟ್ಯವೆಂದರೆ ಅವುಗಳ ಸಾಮಾಜಿಕತೆ. ಮೊಗಳ್ಳಿ ಅವರ ಪ್ರಾರಂಭದ ಕತೆಗಳಲ್ಲಿ ಸಮಾಜದ ನಿರ್ಲಕ್ಷಿತ ಶೋಷಿತ ಹಾಗೂ ತೀರ ಸಾಮಾನ್ಯರೆನ್ನಿಸುವುವರ ಬದುಕು ಅವರ ಶೋಧನೆಯ ವಿಷಯವಾಗಿದೆ. ಈ ಬದುಕಿನ ನೋವು ಯಾತನೆಗಳ ವಾಸ್ತವದ ಗ್ರಹಿಕೆಯೊಡನೆ ಅವುಗಳನ್ನು ಮೀರಿ ಹೊರಹೊಮ್ಮುವ ಜೀವಧ್ವನಿ ಹಾಗೂ ಸುಖದ ಹಂಬಲಗಳನ್ನು ಗುರುತಿಸುವ ಒಂದು ಪ್ರಾಮಾಣಿಕ ಪ್ರಯತ್ನ ಇಲ್ಲಿರುವುದು ಕತೆಗಳ ವೈಶಿಷ್ಟ್ಯವಾಗಿದೆ. ಕತೆಗಳಲ್ಲಿ ಪ್ರತಿಭಟನೆ ಇದೆ, ಅಲ್ಲಲ್ಲಿ ಅದು ನಿರ್ಘೋಷವಾದದ್ದು, ಅರವಿಂದ ಮಾಲಗತ್ತಿ, ಕುಂ. ವೀರಭದ್ರಪ್ಪ, ಬೆಸಗರಹಳ್ಳಿ ರಾಮಣ್ಣ, ದೇವನೂರರ ಕತೆಗಳಲ್ಲಿದ್ದಂತೆ ಪ್ರತಿಭಟನೆ ಗೋಚರವಾಗುತ್ತದೆ.

"ಸಾಮಾಜಿಕ ತುಳಿತಕ್ಕೆ ಒಳಗಾದ ಕೆಳಜಾತಿಯ ಜನ ರಚಿಸಿದ ವಿಮೋಚನೆಯ ಸಾಹಿತ್ಯವೇ ದಲಿತರ ಸಾಹಿತ್ಯ"[೬] ದಲಿತರ ಹೋರಾಟ ವಿಕೃತ. ಮನಸ್ಸಿನ ಕೂಗಾಟವಲ್ಲ. ಮೌಲ್ಯಗಳ ಸಾರಾಸಗಟು ನಿರಾಕರಣೆಯೂ ಅಲ್ಲ. ಅದು ಚೂರು ಚೂರಾಗಿರುವ ದಲಿತ ವ್ಯಕ್ತಿತ್ವದ ಪುನರ್ ಸೃಷ್ಟಿ, ಜಾಗತಿ ಮತ್ತು ಜವಾಬ್ದಾರಿಯ ಸಮ್ಮಿಲನ.

"ದಲಿತ ವರ್ಗದವರ ರಾಜಕೀಯ ಆರ್ಥಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುವ ಪ್ರೇರಕಶಕ್ತಿ, ಇದು ಕೇವಲ ಸಂಘರ್ಷವಲ್ಲ, ಪ್ರತಿಯೊಬ್ಬ ದಲಿತನ ಅಂತರಂಗದ ಸಂಘರ್ಷವೂ ಹೌದು"[೭] ಎಂದು ಗ್ರಾಮ್ಯ ಪರಿಯನ್ನು ತಿಳಿಸುವ ಸಿದ್ದಲಿಂಗಯ್ಯ ಅವರು. "ದಲಿತರ ಅಸಹಾಯಕ ಬದುಕಿನಲ್ಲಿಯೇ ಇರುವ ಜೀವನ ಚೈತನ್ಯವನ್ನು ಗುರುತಿಸುವ ಕಥೆಗಳು, ದಲಿತರ ಬದುಕಿನ ಹತಾಶೆಗಳನ್ನು ಚಿತ್ರಿಸುವ ಕತೆಗಳು, ದಲಿತರ ಒಳಗಡೆಯೇ ದಲಿತರ ಕ್ರೌರ್ಯವನ್ನು ಗುರುತಿಸುವ ಕತೆಗಳು, ದಲಿತರ ಮೇಲೆ ಉಳ್ಳವರು ನಡೆಸುತ್ತಿರುವ ದೌರ್ಜನ್ಯಗಳನ್ನು ಸಾರುವ ಕತೆಗಳು ದಲಿತರು ತಾವಾಗಿಯೇ ಸೃಷ್ಟಿಸಿಕೊಂಡ ಬದುಕಿನ ಅನಿವಾರ್ಯತೆಯನ್ನು ಗುರುತಿಸುವ ಕತೆಗಳು".[೮]

ಈ ನಿಟ್ಟಿನಲ್ಲಿ ದೇವನೂರು ಮಹಾದೇವ ಅವರು 'ದ್ಯಾವನೂರು' ಕಥಾಸಂಕಲನ, ಮ.ನ.ಜವರಯ್ಯ ಅವರ 'ಬುರುಡೆಗೆ ಸ್ವರ್ಗ', ರಾಮಣ್ಣನವರ 'ಆಳು ಮಗ', 'ಜಾಡುಮಲಿ' ಅರವಿಂದ ಮಾಲಗತ್ತಿ ಅವರ ಮುಗಿಯದ ಕಥೆಗಳು' ಹೀಗೆ ಇನ್ನೂ ಹಲವಾರು ಕತೆಗಳು ಕಂಡುಬರುತ್ತವೆ. ಈ ಕಥೆಗಳ ಹಾಗೆ ಮೊಗಳ್ಳಿ ಅವರ ಕತೆಗಳಲ್ಲಿ ಗ್ರಾಮ್ಯ ಸೊಗಡು ಅಡಕಗೊಂಡಿರುವುದನ್ನು ಕಾಣುತ್ತೇವೆ.

## ೧.೨ ಜಾತ್ಯಾತೀತ ನೆಲೆಗಳು

ಭಾರತೀಯ ಸಂವಿಧಾನದಲ್ಲಿ ಸಾರ್ವಭೌಮ, ಸಮಾಜವಾದಿ, ಜಾತ್ಯಾತೀತ, ಪ್ರಜಾಸತ್ತಾತ್ಮಕ, ಎಂಬ ಸಮಾನತೆಯನ್ನು ಒಳಗೊಂಡಂತಹ ಈ ಮೇಲಿನ ಹಕ್ಕು ಬದ್ಧ ತತ್ವಗಳು ಸಮಾಜದಲ್ಲಿ ಎಲ್ಲರು ಒಂದೇ ಎಂಬ ಭಾವನೆಯನ್ನು ಬಿತ್ತುವಂತಹ ಧ್ಯೇಯ ವಾಕ್ಯಗಳಾಗಿವೆ. ಮೊಗಳ್ಳಿ ಅವರ ಕಥೆಗಳಲ್ಲಿ ಪ್ರಧಾನವಾಗಿ ಸಮಾನತೆಯ ಆಶಯ ಅಲ್ಲಲ್ಲಿ ಕಂಡುಬಂದರು, ಅವು ಸಮಾಜದ ಮುಖ್ಯವಾಹಿನಿಗೆ ಬರದೆ ನೇಪಥ್ಯಕ್ಕೆ ಸರಿದಿರುವ ಕಥೆಗಳು, ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಅವು ಪ್ರಮುಖವೆನ್ನಿಸಿಲ್ಲ, ಮುಂದುವರಿದಂತೆ ಸಮಾನತೆಗಾಗಿ ಹಪಹಪಿಸುವ ಕಥೆಗಳು ಗೋಚರಿಸುತ್ತವೆ.

'ಕೆರೆಕೆಂಪವ್ವ' ಕಥೆಯಲ್ಲಿ ಕೆಂಪವ್ವ ಎಂಬ ಪಾತ್ರದ ಮೂಲಕ ಕಥೆಗಾರರು ಸಮಾನತೆಯ ಕನಸು ಕಾಣುವ ಆಶಯವನ್ನು ಅಭಿವ್ಯಕ್ತಿಸಿದ್ದಾರೆ. ಕಥೆಯಲ್ಲಿ ಕೆಂಪವ್ವ ಸ್ವಾತಂತ್ರ್ಯ, ಸಮಾನತೆ ಬ್ರಾತೃತ್ವ ಮುಂತಾದವುಗಳ ಅರಿವು ಇಲ್ಲದಿದ್ದರೂ ಜಾತ್ಯಾತೀತ ಭಾವನೆಯನ್ನು ಅರಿತು, ಹೊಂದಾಣಿಕೆಯಿಂದ ಬದುಕುತ್ತಿರುವುದನ್ನು ಕತೆಗಾರರು ಅಭಿವ್ಯಕ್ತಿಸಿದ್ದಾರೆ. ಅವಳಲ್ಲಿ ಸಮಾನತೆ ಎಂಬ ಸಾಮಾಜಿಕ ಅಸ್ತ್ರ ಆಂತರ್ಯದಲ್ಲಿ ಕಥೆಯ ಆರಂಭದಿಂದ ಅಂತ್ಯದವರಿಗೂ ಹುದುಗಿಕೊಂಡು ಬಂದಿರುವುದು ವಿಶೇಷವಾದುದು. ಈ ಪಾತ್ರದ ಮುಖೇನ ಸಮಾಜಮುಖಿಯಾದ ಚಿಂತನೆಯನ್ನು ಕಟ್ಟಿಕೊಡುವಲ್ಲಿ ಮೊಗಳ್ಳಿಅವರು ಯಶಸ್ವಿಯಾಗಿದ್ದಾರೆ.

ಕಥೆಯಲ್ಲಿ ಕೆರೆ ಕೆಂಪವ್ವ ಮೇಲ್ಜಾತಿಯಲ್ಲಿ ಇದ್ದರೂ ಕೂಡ ಹೊಲಗೇರಿಗೆ ಹೋಗುತ್ತಾ ಅವರ ಪ್ರೀತಿಗೆ ಪಾತ್ರಳಾಗುತ್ತಾಳೆ. ಅದೇನೋ ಋಣಬಂಧವೇನೋ, ತಮ್ಮ ಮಗಳಂತೆ ಆಕೆಯನ್ನು ಹೊಲಗೇರಿಯ ಮಹಿಳೆಯರು ಅಪಾರವಾದ ಪ್ರೀತಿಯನ್ನು ತೋರಿಸುತ್ತಿದ್ದರು. ಕಾಲಕಳೆದಂತೆ ಒಂದು ಭೀಕರ ಘಟನೆ ಉದ್ಭವವಾಯಿತು. ಅದು ಹೇರಳ ಮಳೆ, ಆ ಮಳೆಯಿಂದ ತಾಳಲಾರದೆ ಜನ ಅಸ್ತವ್ಯಸ್ಥವಾಗಿದ್ದರು. ಊರಿನ ಕೆರೆಕಟ್ಟೆಗಳು ಒಡೆಯುವ ಸಂದರ್ಭದಲ್ಲಿ ಜನರು ಗಾಢವಾಗಿ ಆಲೋಚಿಸಿ, ಸಂರಕ್ಷಣೆಗಾಗಿ, ದೈವದ ಪರಿಗೆ ದಿಟ್ಟಿಸಿ ಕೆರೆಗೆ ಬಲಿಕೊಟ್ಟರೆ, ಮಳೆ ನಿಲ್ಲುತ್ತದೆ ಎಂಬ ಮೌಢ್ಯತೆಯಿಂದ ಊರ ಗೌಡರಾದ ಕೋಣಮೇಗೌಡನಿಗೆ ತಿಳಿಸುತ್ತಾರೆ.

ಆತನ ಕಾಮದಾಹವನ್ನು ಕೆಂಪವ್ವ ತಿರಸ್ಕರಿಸಿದ್ದನ್ನು ಯೋಚಿಸಿ, ಆಕೆಯ ಗಂಡ ಜವರಯ್ಯನಿಗೆ ಮನವೊಲಿಸುವುದರಲ್ಲಿ ಸಾಹಸ ಮಾಡಿ, ಒಪ್ಪಿಸುತ್ತಾನೆ. ಕೆರೆಗೆ ಒಬ್ಬ ಮುತ್ತೈದೆಯ ಬಲಿಕೊಡುವ ತೀರ್ಮಾನದಲ್ಲಿ, ಕೆಂಪವ್ವನ ಬಲಿಕೊಡಲು ಕುಟುಂಬದವರ

ಮತ್ತೆ ಗೌಡರೆಲ್ಲರ ಒಪ್ಪಿಗೆಯಿಂದ ಆಕೆಯನ್ನು ಬಲಿಕೊಡಲು ತೀರ್ಮಾನಿಸುತ್ತಾರೆ. ಈ ಸಂದರ್ಭದಲ್ಲಿ ಕೆಂಪವ್ವಳಿಗೆ ಕೊನೆ ಆಸೆ ಏನೆಂದು ಕೇಳಿದಾಗ, ಆಕೆ ಬಯಸಿದ್ದು, ನಾನು ಹೊಲೆಯರ ಈರವ್ವನನ್ನು ಕಂಡು ವೀಳ್ಯ ಕೊಟ್ಟು ಬರಬೇಕು ಎಂದು ಗದ್ಗದಿತಗೊಂಡು ದುಃಖದಲ್ಲಿ ಕೋರಿಕೊಳ್ಳುತ್ತಾಳೆ. ಗೌಡ್ರು ಮನೆ ಹೆಂಗಸರು ಆ ಹೊಲೆಗೇರಿಯ ಮೇಲೆ ಇವಳಿಗೇನೋ ಪ್ರೀತಿಯೋ ಎಂದು ಸಿಡುಕುತ್ತಾರೆ.

ಇಂತಹ ಕರುಣಾಮಯ ಸ್ಥಿತಿಯನ್ನು ಕತೆಗಾರರು ಜೀವಂತವಗಿ ಕಟ್ಟಿಕೊಡುತ್ತಾರೆ. ತದನಂತರ ಆಕೆ ದಾಪು ಕಾಲಲ್ಲಿ ಬಂದು "ಅವ್ವ ಕೊನೆ ಸಲ ಮುಖನೋಡಿ ಹೋಗುವಂತ ಬಂದಿವಿನಿ ಎದ್ದು ಬಾರವ್ವ"[೯] ಎಂದು ಮನೆ ಮುಂದೆ ನಿಂತು ಆರ್ದ್ರವಾಗಿ ಈರಮ್ಮನನ್ನು ಕರೆದಳು. "ಅಯ್ಯೋ ಮಗಳೆ ನಿನ್ನ ಜೀವ ಕಾಯೋಕೆ ಆಗದೆ ಕೊರಗತ್ತಿರೋ ಈ ಪಾಪಿ ಮುಖಾವ ಯಾಕೆ ನೋಡಕೆ ಬಂದವ್ವಾ"[೧೦] ಎನ್ನುತ್ತಾ ಕೆಂಪವ್ವನ ಮುಂದೆ ಅಸಹಾಯಕಳಾಗಿ ನಿಲ್ಲುತ್ತಾಳೆ.

ಕಥೆಗೆ ಪೂರಕವಾಗಿ ತಿ.ನಂ.ಶ್ರೀಕಂಠಯ್ಯ ಅವರ ಕೃತಿ 'ಕೆರೆಗೆಹಾರ' ಊರಿನ ಹಿತಕ್ಕಾಗಿ ನಾಡಿನ ಕ್ಷೇಮಕ್ಕಾಗಿ ಕೆಲಸಗಳನ್ನು ಕೈಗೊಂಡಾಗ ಅಡ್ಡಿ ತಡೆಗಳು ಒದಗುವುದು ಸಹಜ. ದನಕರುಗಳಿಗೂ ಪೈರು ಪಚ್ಚೆಗಳಿಗೂ ನೀರು ಒದಗಲೆಂದು ಬಲುವೆಚ್ಚದಿಂದ ಕೆರೆಯನ್ನು ಕಟ್ಟಿಸಿದರೆ ನೀರೇ ಬಾರದಿರಬಹುದು. ಪ್ರಜೆಗಳು ಸುರಕ್ಷಿತವಾಗಿರಲೆಂದು ಕೋಟೆಯನ್ನು ಎಬ್ಬಿಸಿದರೆ ಗೋಡೆಯೇ ಭದ್ರವಾಗಿ ನಿಲ್ಲದಿರಬಹುದು. ಇಂಥ ಸಂದರ್ಭದಲ್ಲಿ ನಮ್ಮ ಹಿರಿಯರು ಇಲ್ಲೇನೋ ದೈವಿಕವಾದ ಕಾರಣವಿರಬೇಕೆಂದು ನಂಬಿ ಜೋಯಿಸರನ್ನು ವಿಚಾರಿಸುತ್ತಿದ್ದರು. ಈ ನಿಟ್ಟಿನಲ್ಲಿ ಎಲ್ಲ ಹೊಣೆಗಾರಿಕೆ ಗ್ರಾಮದ ಮುಖಂಡನಾದ ಗೌಡರಿಗೆ ಇರುತ್ತದೆ. ಗ್ರಾಮವನ್ನು ಸಂರಕ್ಷಿಸುವ ಸಲುವಾಗಿ ಜೋಯಿಸರ ಬಳಿ ಶಾಸ್ತ್ರ, ಸಂಪ್ರದಾಯಗಳನ್ನು ಕೇಳಿ ಗ್ರಾಮ ರಕ್ಷಣೆಗೆ ಮುಂದಾಗುತ್ತಾರೆ.

ಆ ಹಿನ್ನಲೆಯಲ್ಲಿ 'ಕೆರೆಗೆಹಾರ' ಎಂಬ ಕೃತಿಯಲ್ಲಿ ಕೇಂದ್ರಬಿಂದುವಾಗಿ ಕಾಣುವ 'ಭಾಗೀರಥಿ' ಈಕೆ ಊರ ಗೌಡನ ಕಿರಿಯ ಸೊಸೆಯಾಗಿರುತ್ತಾಳೆ. ಊರಿಗೆ ನೀರಿಲ್ಲ ಎಂಬ ಕಾರಣದಿಂದ, ಗ್ರಾಮದ ಹಿರಿಯರೆಲ್ಲ ಸೇರಿ ತೀರ್ಮಾನಿಸಿ, 'ಕಡೆಸೊಸಿ ಭಾಗೀರಥಿನ್ನ ಹಾರವ ಕೊಡಬೇಕು, ಹಾರ ಕೊಡಬೇಕಂತ ಮಾತಾತು ಮನೆಯಾಗ"[೧೧] ಅಲ್ಲಿ ಕೆಂಪವ್ವಳ ಕೋರಿಕೆಯಂತೆ ಇಲ್ಲಿ ಭಾಗೀರತಿಯ ಕೋರಿಕೆಯು ಇತ್ತು.

"ಸಣ್ಣ ಸೊಸಿ ಭಾಗೀರಥಿ ತವರ ಮನಿಯ ಬಿಟ್ಟು ಗೆಣತಿ ಮನೆಗೆ ನಡೆದಳು ತಲಬಾಗಿಲದಾಗ ಗೆಳತಿನ್ನ ಕಂಡಳು"[೧೨] "ಎಂದಿಲ್ಲದೆ ಭಾಗೀರಥಿ ಇಂದ್ಯಾಕ ಈ ಅಳುವು"

ಎಂದು ಗೆಳತಿ ಕೇಳುತ್ತಾಳೆ. ಅದಕ್ಕೆ ಭಾಗೀರಥಿ ಅಂಜುತ್ತಾ, ಅಳುಕುತ್ತ ಹೇಳಲೆ ಗೆಳತಿ, ಹೇಳಲೆ ಗೆಳತಿ"[೧೩] ಎನ್ನುತ್ತಾಳೆ. "ಅಂಜಬೇಡ ಗೆಳತಿ ಅಳುಕಬೇಡ ಗೆಳತಿ"[೧೪] ಎಂಬುದು ಗೆಳತಿಯ ಧೈರ್ಯದ ಆಶ್ವಾಸನ, ಅಕ್ಕನ ಮಾತು ಹಾಗಿರಲಿ, ತಂದೆ, ತಾಯಿ ಅವರಲ್ಲಿ ಕೂಡ ಕಾಣದಿದ್ದ ಆತ್ಮೀಯತೆಯನ್ನೂ ನಿರಾವರಣ ಭಾವವನ್ನೂ ಭಾಗೀರಥಿ ಗೆಳತಿಯಲ್ಲಿ ಕಂಡಳು.

ಅಲ್ಲಿ ಕೆಂಪವ್ವ ತನ್ನವರ ಪ್ರೀತಿಯಿಂದ ವಂಚಿತಳಾಗಿರುತ್ತಾಳೆ. ಹಾಗೇ ಭಾಗೀರಥಿ ಕೂಡ ವಂಚಿತಳಾಗಿ, ಸ್ನೇಹಿತೆಯೊಡನೆ ಅಪಾರವಾದ ಪ್ರೀತಿ ಬಾಂಧವ್ಯ ಗಳಿಸಿಕೊಂಡಿರುತ್ತಾಳೆ. ಇಂತಹ ಸಂದರ್ಭಗಳಲ್ಲಿ ಭಾಗೀರಥಿ ತನ್ನ ಹೃದಯವನ್ನು ಮೊದಲ ಬಾರಿ ಇವಳೆದುರಿಗೆ ತೆರೆದು ನೇರವಾದ ಮಾತಿನಲ್ಲಿ ಇದ್ದ ವಿಷಯವನ್ನು ಇದ್ದ ಹಾಗೇ ಹೊರಗೆಡಹುತ್ತಾಳೆ. ಇವಳ ನಂಬಿಕೆ ಶ್ರದ್ಧೆಗೆ ಆ ಗೆಳತಿ ಎಷ್ಟೊಂದು ಅರ್ಹಳು! ಅಂದರೆ ಭಾಗೀರಥಿಯ ಮನಸ್ಸಿನ ಒಳತೋಟಿಯನ್ನು ಸರಿಯಾಗಿ ಅರ್ಥ ಮಾಡಿಕೊಂಡವಳು ಈ ಗೆಳತಿಯೊಬ್ಬಳು. ಗೆಳತಿಗೆ ಭಾಗೀರಥಿಯಲ್ಲಿ ಅವ್ಯಾಜವಾದ ಪ್ರೇಮವೂ, ಅವಳ ಶ್ರೇಯಸ್ಸಿನಲ್ಲಿ ಅಪರಿಮಿತವಾದ ಆಕಾಂಕ್ಷೆಯೂ ಇದ್ದ ಕಾರಣದಿಂದಲೇ ಅವಳು ಹೀಗೆ ಖಂಡಿತವಾಗಿ ಹೇಳಲು ಸಾಧ್ಯವಾಯಿತು.

ಅಂತೂ ಭಾಗೀರಥಿಯ ಮನಸ್ಸಿನ ಹೊಯ್ದಾಟ ನಿಂತಿತು. ಬಲಿದಾನಕ್ಕಾಗಿ ಎದೆಯನ್ನು ಗಟ್ಟಿಮಾಡಿಕೊಂಡು ಈ ಸಣ್ಣ ಸೊಸಿ ಅತ್ತೆಯ ಮನೆಗೆ ಹಿಂದಿರುಗಿದಳು. "ಸರ್ರನೆ ಹೋದಳು ಭರ್ರನೆ ಬಂದಳು".[೧೫] ಇಲ್ಲಿ ಕೆಂಪವ್ವ "ನಾನು ವೋಗ್ತೀನವ್ವಾ ಅಲ್ಲಿಗಂಟ ಬಂದು ನನ್ನ ಕಳಿಸಿಕೊಡವ್ವಾ"[೧೬] ಎಂದು ಮಾತುಗಳನ್ನು ನುಂಗುವ ರೀತಿಯಲ್ಲಿ ಬೇಡುತ್ತಾಳೆ. ತದನಂತರ ಕೆಂಪವ್ವನನ್ನು ಕೆರೆಗೆ ತಳ್ಳಿ ಬಲಿಕೊಡುವ ಘಟನೆ ಜರುಗುತ್ತದೆ. ಇಲ್ಲಿ ಗ್ರಾಮದ ಉಳಿವಿಗಾಗಿ ಬಲಿಯಾದ 'ಕೆಂಪವ್ವ'ನ ಹೆಸರಿನಲ್ಲಿ ಕೆರೆಯ ಬದಿಗೆ ಆಕೆಯನ್ನು ದೇವರೆಂದು ಘೋಷಿಸಿ ಕಲ್ಲನ್ನು ನಿರ್ಮಿಸುತ್ತಾರೆ. ಈ ಬಲಿದಾನದ ದಾರುಣ ಸ್ಥಿತಿ ನೋಡಿ 'ಎತ್ತಜ್ಜಿ' ಕೆಂಪವ್ವನ ಅಪ್ಪಿಕೊಳ್ಳುವಂತೆ ಆ ಕಲ್ಲನ್ನು ಬಿಗಿಯಾಗಿ ತಬ್ಬಿಕೊಂಡು ಮಳೆಗಾಳಿಗೆ ನೊಂದು ಕೋಣಮೇಗೌಡನಿಗೆ ಶಾಪ ಹಾಕಿ ಜೀವ ಬಿಡುತ್ತಾಳೆ.

ಮೇಲಿನ ಕತೆಯಲ್ಲಿ ಗ್ರಾಮ್ಯ ಜೀವನದ ಸೊಗಡು, ನಂಬಿಕೆ, ಆಚರಣೆ, ಇದೆಲ್ಲವನ್ನು ಗ್ರಹಿಸಿದರೆ, ಜಾತಿ ಮುಖ್ಯ ನಿಜ, ಆದರೆ ಜಾತಿವೊಂದೆ ನಿರ್ಣಾಯಕವಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ಜಾತಿಯನ್ನು ಮೀರಿದ ಪಾತ್ರಗಳನ್ನು ಗ್ರಾಮ ಜೀವನದಲ್ಲಿ ನೋಡಬಹುದು, ಎಂಬ ಮಾತಿನ ತತ್ವ 'ಕೆಂಪವ್ವ' ಮತ್ತು 'ಎತ್ತಜ್ಜಿ' ಇಬ್ಬರು ಜಾತಿ ಎಂಬ ಮಿತಿಯನ್ನು ಮೀರಿ

ಸಾವುಗೀಡಾಗುವುದನ್ನು ನೋಡಿದರೆ, ದೇಹ ಎರಡು ನಿಜ, ಆದರೆ ಅವರ ಯೋಚನೆ ಮತ್ತು ನಡೆ ಒಂದೇ ಎಂಬುದು ಸ್ಪಷ್ಟವಾಗುತ್ತದೆ.

ಇಲ್ಲಿ ತಿಳಿಯುವುದು ಮನುಷ್ಯನ ಭಾವನೆಗಳು ಶುದ್ಧವಾಗಿದ್ದರೆ, ಯಾವ ಜಾತಿಯು ಬೇಕಿಲ್ಲ, ಎಂಬ ಜಾತ್ಯಾತೀತ ಆಶಯಗಳನ್ನು ತಮ್ಮ ಕತೆಗಳಲ್ಲಿ ಪ್ರತಿಪಾದಿಸಿದ್ದಾರೆ. ಜಾತ್ಯಾತೀ ನೆಲೆಗಳು ಮೊಗಳ್ಳಿಯವರ ಕತೆಗಳಲ್ಲಿ ಸಾಕಷ್ಟು ದೊರೆಯುತ್ತದೆ. ಮೇಲ್ವರ್ಗದವರ ಶೋಷಣೆಯನ್ನು ಬಿಚ್ಚಿಡುವುದು ಒಂದು ನೆಲೆಯಾದರೆ ಮೇಲ್ವರ್ಗದವರ ಮಾನವೀಯ ಅಂತಃಕರಣವನ್ನು ಚಿತ್ರಿಸುವುದು ಮತ್ತೊಂದು ನೆಲೆಯಾಗಿದೆ. ಇಲ್ಲಿನ ಕಥೆಗಳು ಏಕಮುಖಿ ಚಲನೆಯಲ್ಲಿ ಸಾಗದೆ, ಬಹುಮುಖಿ ನೆಲೆಯಿಂದ ಚಲಿಸಿರುವುದು ಕಥೆಗಳ ಸತ್ವಕ್ಕೆ ಸಾಕ್ಷಿಭೂತವಾಗಿದೆ.

## ೧.೩ ಕಥೆಗಳು ಪ್ರತಿಪಾಧಿಸುವ ತಾತ್ವಿಕತೆ

ಪ್ರಧಾನವಾಗಿ ಮೊಗಳ್ಳಿ ಅವರ ಕಥಾಸಂಕಲನಗಳು ನೇಪಥ್ಯಕ್ಕೆ ಸರಿಸಿದ ದಲಿತ ಜನಾಂಗದ ಸಂವೇದನೆಯನ್ನು ಅನುಭವಿಸಿದ ಯಾತನೆಯನ್ನು ದಾರುಣ ಸ್ಥಿತಿಗತಿಗಳನ್ನು ಅಭಿವ್ಯಕ್ತಿಸುತ್ತವೆ. ದಲಿತರ ಬದುಕಿನ ಬವಣೆಗಳನ್ನು ಹೊರ ಹಾಕುತ್ತಾ, ಶತಶತಮಾನಗಳಿಂದ ತುಳಿತಕ್ಕೆ ಒಳಗಾಗಿ, ಅಪಮಾನಕ್ಕೆ ಹೀಡಾಗಿ ಬಂದಂತಹ ಶೋಷಿತ ಸಮುದಾಯಗಳ ಕೌಟುಂಬಿಕ ಸಮಸ್ಯೆಗಳ ಸ್ಥಿತಿಗತಿಗಳನ್ನು ವಿಭಿನ್ನ ನೆಲೆಗಟ್ಟಿನಲ್ಲಿ ಚಿತ್ರಿಸುತ್ತಾರೆ.

ಕಥೆಗಳಲ್ಲಿ ಮೇಲ್ಜಾತಿಯ ಜನರು ಮತ್ತು ಅದೇ ಜಾತಿಗೆ ಸೇರಿದ ಪುರುಷರಿಂದ ಆಗುವಂತ ದುಷ್ಪರಿಣಾಮಗಳು, ಮಹಿಳೆಯರ ಮೇಲೆ ಹೇಗೆ ತನ್ನ ಅಧಿಪತ್ಯವನ್ನು ಸಾಧಿಸಿವೆ ಎನ್ನುವುದನ್ನು ಕಥೆಗಾರರು ಅಭಿವ್ಯಕ್ತಪಡಿಸಿದ್ದಾರೆ. ಇದರೊಂದಿಗೆ ಸ್ತ್ರೀಯರ ಆಂತರ್ಯದ ದುಃಖ ದುಮ್ಮಾನವನ್ನು ನೋವಿನ ಆಳವನ್ನು, ಅವಮಾನಕ್ಕೆ ಒಳಗಾದ ಸಂಗತಿಗಳು ಎಳೆ ಎಳೆಯಾಗಿ ಅಭಿವ್ಯಕ್ತಗೊಂಡಿವೆ.

ಮೊಗಳ್ಳಿ ಅವರ ಮುಂದಿನ ಪರಂಪರೆಗೆ ಭರವಸೆ ಹುಟ್ಟಿಸುವ ದಲಿತ ಕಥೆಗಾರರಾಗಿದ್ದಾರೆ. ಇವರು ಬರೆದ ಕಥೆಗಳ ಸಂಖ್ಯೆ ಮತ್ತು ಅವುಗಳ ಕಲಾತ್ಮಕತೆಯ ಅಭಿವ್ಯಕ್ತಿ ಸಂವೇದನೆಯ ದೃಷ್ಟಿಯಿಂದ ದಲಿತ ಬಂಡಾಯ ಕತೆಗಾರರಲ್ಲಿ ಮುಖ್ಯರಾದವರು ಎಂದರೆ ಅತಿಶಯೋಕ್ತಿಯಾಗಲಾರದು. ಕಥಾ ಸಂಕಲನಗಳು ಗಮನ ಸೆಳೆಯುತ್ತಿರುವುದನ್ನು ಕಂಡರೆ, ದೇವನೂರು ಮಹಾದೇವ ಅವರು ಒಂದು ಚೌಕಟ್ಟಿನಲ್ಲಿ ದಲಿತರ ಬದುಕನ್ನು ಕಲಾತ್ಮಕತೆಯ, ತಾತ್ವಿಕತೆಯ ಸ್ವರೂಪದಲ್ಲಿ ಕಟ್ಟಿಕೊಟ್ಟಿದ್ದರೆ, ಮೊಗಳ್ಳಿ ಅವರು ಆ ಸ್ವರೂಪದ

ಶೋಷಿತರ ಬದುಕನ್ನು ವಿಸ್ತರಿಸಿ ಮತ್ತಷ್ಟು ವಿವರವಾಗಿ ನಿರೂಪಿಸಿದ್ದಾರೆ ಎಂಬ ಭಾವನೆ ಮೂಡುತ್ತದೆ.

ದಲಿತರ ಚಾರಿತ್ರ್ಯಿಕ, ಸಾಂಸ್ಕೃತಿಕ ಪ್ರತೀಕಗಳೊಂದಿಗೆ ಸಮರ್ಥಿಸುವ ಕಲೆಗಾರಿಕೆ ಎದ್ದು ಕಾಣುತ್ತದೆ. ಇದು ಇವರ ಕಥೆಗಳ ತಾತ್ವಿಕ ಗ್ರಹಿಕೆಯಾಗಿದೆ. ಈ ಹಿನ್ನಲೆಯಲ್ಲಿ ಮೊಗಳ್ಳಿ ಅವರ ಮೇಲಾಗಿರುವ ದೇವನೂರು ಮಹಾದೇವರ ಪ್ರೇರಣೆ, ಪ್ರಭಾವಗಳನ್ನು ಸೂಕ್ಷ್ಮವಾಗಿ ಅಲ್ಲಲ್ಲಿ ಗುರುತಿಸಬಹುದಾಗಿದೆ. ದಲಿತರ ಬದುಕಿನ ವಾಸ್ತವತೆಯನ್ನು ಗ್ರಹಿಸುವುದು ಎದ್ದು ಕಾಣುತ್ತದೆ. ಶೋಷಿತ ಬದುಕಿನ ಸಂವೇದನೆಗಳಿಗೆ ಜೀವತುಂಬಿರುವುದು ಹಾಗೆ ಕಥೆಗಳು ಜಾನಪದ ಕಥೆಗಳ ಸ್ವರೂಪವನ್ನು ಪಡೆದುಕೊಂಡಿರುವುದು ಭಾಷಿತ ನೆಲೆಯಲ್ಲಿ ಮುಖ್ಯವಾದುದು. ಆಶಯಗಳನ್ನು ಬಳಸಿಕೊಳ್ಳುವುದರ ಮೂಲಕ ದಲಿತರ ಬದುಕಿನ ಸಾಧ್ಯತೆಗಳಿಗೆ ಒತ್ತು ಕೊಟ್ಟು ಕಳೆದುಹೋದ ಶೋಷಿತರ ಜಾನಪದ ಸಂಸ್ಕೃತಿಯನ್ನು ಹುಡುಕಿ ತೆಗೆದು ಪ್ರತೀಕವಾಗಿ ಬಳಸಿಕೊಳ್ಳುವುದು ವಿಶೇಷವಾಗಿದೆ.

ಹಳ್ಳಿಯ ಹಳೆ ಕಾಲದ ದಲಿತರ ವೈಭವದ ದಿನಗಳನ್ನು ಕಂಡರೆ, ಅಷ್ಟೇ ಪ್ರೀತಿ, ಅದನ್ನು ಉಳಿಸಿಕೊಳ್ಳಬೇಕೆಂಬ ಹಂಬಲವನ್ನು ಕತೆಗಳು ಸ್ಪಷ್ಟಪಡಿಸುತ್ತವೆ. ದಲಿತ ಸಾಂಸ್ಕೃತಿಕ ಬದುಕಿನ ಅನನ್ಯತೆಯಲ್ಲಿ ಒಂದೊಂದು ಸಾರಿ ವೈಭವೀಕರಿಸುವ ಅಪಾಯಗಳಿಗೂ ಒಳಗಾಗುತ್ತಾರೆ, ಆದರೆ ಅವುಗಳನ್ನು ವೈಚಾರಿಕವಾಗಿ ಬಳಸಿಕೊಳ್ಳಬೇಕೆಂಬ ಎಚ್ಚರವನ್ನು ಕಾಪಾಡಿಕೊಂಡಿರುವುದು ಗಮನಾರ್ಹ ಅಂಶವಾಗಿದೆ.

ಒಂದು ಘಟನೆ ಸಿಕ್ಕಿದರೆ ಸಾಕು, ಅದಕ್ಕೆ ಜೀವ ತುಂಬಿ ಕಥೆಯಾಗಿಸುವ ಕಲೆಗಾರಿಕೆ ಸಿದ್ಧಿಸಿದೆ ಎನ್ನುವ ನಿಟ್ಟಿನಲ್ಲಿ ದಲಿತ ಕೇರಿಯ ಅನುಭವ, ದೈನಂದಿನ ಕ್ರಿಯೆ, ಬದುಕಿನ ಶೋಷಣೆ ಮುಂತಾದ ಸಹಜ ಸ್ಥಿತಿಗತಿಗಳನ್ನು ಹೇಳುವುದು ಹೇಗೆ ಎಂಬ ಮಾದರಿಯನ್ನು ಇವರ ಕಥೆಗಳು ಸಿದ್ಧಿಸಿಕೊಂಡಿವೆ. ಅವರ ಕಥೆಗಳಿಗೆ ಮುಗ್ಧತೆ, ಪ್ರಾಮಾಣಿಕತೆಯಿದೆ, ಅಂತೆಯೇ ದಲಿತರ ಸಿಟ್ಟು, ಆಕ್ರೋಶ, ಪ್ರತಿಭಟನೆಗಳು ಸ್ಫೋಟಗೊಳ್ಳುತ್ತವೆ, ಚನ್ನಪಟ್ಟಣ, ರಾಮನಗರದ ಸುತ್ತಮುತ್ತಲ ಬದುಕಿನ ಹಿನ್ನಲೆಯಲ್ಲಿ ಕಥೆಗಳನ್ನು ಬರೆಯುತ್ತಿರುವ ಮೊಗಳ್ಳಿ ಭಾಷೆಯ ಮೆಲಿನ ಹಿಡಿತ ಮತ್ತು ದಟ್ಟ ಅನುಭವಗಳನ್ನು ಪಡೆದುಕೊಂಡಿರುವುದು ಕತೆಗಳ ಯಶಸ್ವಿಗೆ ಕಾರಣವಾಗಿವೆ.

ಹೊಸ ಪೀಳಿಗೆಯ ದಲಿತ ಕಥೆಗಾರರಲ್ಲಿ ವಿಶಿಷ್ಟವಾಗಿ ಕಥೆ ಬರೆಯುವ ಮೊಗಳ್ಳಿ ಅವರು ವ್ಯವಸ್ಥೆಯ ವಿರುದ್ಧ ಹೇಗೆ ಪ್ರತಿಭಟನೆಯ ಕ್ರಿಯಾ ರೂಪಕಗಳನ್ನು ತಮ್ಮ ಕಥೆಗಳಲ್ಲಿ ತೆರೆದಿಡುತ್ತಾರೆ, ಅಂತಹ ಕಥೆಗಳಲ್ಲಿ ಅವರ 'ಪಟೇಲ' ಕಥೆಯೂ ಒಂದು. ದಲಿತ

ವಿದ್ಯಾವಂತ ಶಾಲಾ ಹೆಡ್‌ಮಾಸ್ಟರ್ ಕರ್ತವ್ಯ ಪ್ರಜ್ಞೆಯಲ್ಲಿ ದಲಿತ ಹುಡುಗರ ಕ್ರೀಡಾ ಪ್ರತಿಭೆಯನ್ನು ಗುರುತಿಸಿ, ಪ್ರೋತ್ಸಾಹಿಸಿ, ಸಂಘಟಿಸುವ ಕಲೆಗಾರಿಕೆ ಚೆನ್ನಾಗಿದೆ.

ಆಂಧ್ರಪ್ರದೇಶದಿಂದ ಬಂದಿರುವ ಹರಿಜನಕೇರಿಯ ಶಾಲಾ ಹೆಡ್‌ಮಾಸ್ತರು ಇಲ್ಲಿಯ ಶಾಲೆಯ ಹರಿಜನ ಹುಡುಗರ ಕಬ್ಬಡಿ ಕ್ರೀಡಾ ಪ್ರತಿಭೆಯನ್ನು ಕಂಡು ಪ್ರೋತ್ಸಾಹಿಸಿ ಬೆಳೆಸಲು ಬ್ರಾಹ್ಮಣ ಜಾತಿಯೆಂದು ಸುಳ್ಳು ಹೇಳಿಕೊಂಡು ಅದನ್ನು ಸಾಧಿಸಿಕೊಳ್ಳಲು ರೂಪಿಸಿ-ಕೊಂಡಿರುವುದು, ಆತನ ದಲಿತ ಪ್ರಜ್ಞೆಗೆ ಸಾಕ್ಷಿಯಾಗಿದೆ, ಮೇಲ್ಜಾತಿಯ ವ್ಯವಸ್ಥೆಯ ವಿರುದ್ಧ ಪ್ರತಿ ತಂತ್ರಗಾರಿಕೆ ಆಗುತ್ತದೆ.

ವ್ಯವಸ್ಥೆಗೆ ತನ್ನ ಜಾತಿಯನ್ನು ಹೇಳಿಕೊಂಡರೆ ತನ್ನ ಜಾತಿ ಹುಡುಗರ ಪ್ರತಿಭೆಯನ್ನು ಬೆಳೆಸಲು ಸಾಧ್ಯವಾಗುವುದಿಲ್ಲವೆಂಬ ಪರಿಜ್ಞಾನದಲ್ಲಿ ಕಥಾನಾಯಕನ ಈ ತಂತ್ರಗಾರಿಕೆ ವಿವೇಕತೆಯಿಂದ ಕೂಡಿದೆ. ಜಾತಿಯ ಸುಳಿವು ಊರಿನಲ್ಲಿ ಯಾರಿಗೂ ಗೊತ್ತಾಗದ ಹಾಗೆ ಬ್ರಾಹ್ಮಣ ಜಾತಿಯ ಹೆಸರಿನಲ್ಲಿಯೇ ತನ್ನ ಕಾರ್ಯ ಚಟುವಟಿಕೆಯನ್ನು ಆರಂಭಿಸುವ ಹೆಡ್ ಮಾಸ್ತರ್‌ನ ಚಟುವಟಿಕೆ ಕೇವಲ ಶಾಲೆಯ ಆವರಣಕ್ಕೆ ಮಾತ್ರ ಸೀಮಿತವಾಗುವುದಿಲ್ಲ ಅದು ಹರಿಜನ ಕೇರಿಗೂ ವ್ಯಾಪಿಸಿ ಸಂಘಟನೆಗೆ ತೊಡಗುತ್ತದೆ.

ಅ ಜನಗಳಿಗೆ ಅಂಬೇಡ್ಕರ್ ವಿಚಾರಧಾರೆಗಳನ್ನು ಪ್ರಚಾರ ಮಾಡಿ ಅವರಲ್ಲಿ ಜಾಗೃತ ಪ್ರಜ್ಞೆ ಮೂಡಿಸುವ ಮಟ್ಟಕ್ಕೂ ಮುಂದಾಗುತ್ತದೆ. ಇದು ಕಥೆಗಾರನ ತಾತ್ವಿಕ ಆಶಯವಾಗಿದೆ. ದಲಿತ ಹುಡುಗರು ಪಾಠ ಪ್ರವಚನಗಳಲ್ಲಿ ಹಿಂದಿದ್ದರೂ ಕಬಡಿ ಕ್ರೀಡೆಯಲ್ಲಿ ಮುಂದಾಗಿದ್ದರಿಂದ ಅವರನ್ನು ಹೈಸ್ಕೂಲ್‌ಗಳ ವಾರ್ಷಿಕ ಕ್ರೀಡಾಕೂಟಕ್ಕೆ ತರಬೇತಿಗೊಳಿಸಿ ಸಿದ್ಧಗೊಳಿಸುತ್ತಾರೆ. ಇದರಲ್ಲಿ ಶಾಲೆಯ ಹುಡುಗಿಯರ ಕೊಕ್ಕೋ ತಂಡಕ್ಕಿಂತ ಹುಡುಗರ ಕಬಡಿ ತಂಡ ಹೆಚ್ಚು ಬಲಿಷ್ಠವಾಗಿತ್ತು.

ದೈಹಿಕವಾಗಿ ಹೆಚ್ಚು ಸಾಮರ್ಥ್ಯವಿದ್ದ ದಲಿತ ಹುಡುಗರು ಮತ್ತು ಕೆಳಜಾತಿ ಹುಡುಗರು ಇದ್ದುದು ತಂಡದ ಬಲಿಷ್ಠತೆಗೆ ಕಾರಣವಾಗಿತ್ತು. ಅಲ್ಲದೆ ಹೊಲಗೇರಿ ಕುಂಟ ಹುಡುಗನ ನಾಯಕತ್ವದಲ್ಲಿ ಆಯ್ಕೆಗೊಂಡಿದ್ದು ಮತ್ತೊಂದು ವಿಶೇಷವಾಗಿತ್ತು. ದಲಿತ ಹೆಡ್‌ಮಾಸ್ಟರ್‌ನ ಸಂಘಟನಾ ಮನೋಭಾವದಲ್ಲಿ ದಲಿತರು, ಕೆಳಜಾತಿಗಳನ್ನು ಒಗ್ಗಟ್ಟು ಮಾಡುವ ತಂತ್ರಗಾರಿಕೆ ಇದರಲ್ಲಿ ಸೇರಿಕೊಂಡಿದೆ, ಇದು ಆ ಜಾತಿಗಳ ಸಾಮರ್ಥ್ಯ ತೋರುವಂತಹದ್ದು.

ಬಡವರಾಗಿದ್ದರೂ ಅವರಲ್ಲೂ ಹೇಗೆ ಪ್ರತಿಭೆ ಇದೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ. ಈ ಕಥೆಯಲ್ಲಿ ಪ್ರವೇಶ ಪಡೆದುಕೊಂಡಿರುವ ಪಟೇಲ ವ್ಯವಸ್ಥೆಯ

ಶೋಷಣೆ ಪ್ರತೀಕವಾಗಿದ್ದಾನೆ. ಒಂದು ಕಡೆ ದಲಿತರು ತಮ್ಮ ಪ್ರತಿಭೆಗಳಿಂದ ಬೆಳೆಯುತ್ತಿದ್ದರೆ, ಇನ್ನೊಂದು ಕಡೆ ಅವರ ಬೆನ್ನಿಗೆ ವ್ಯವಸ್ಥೆ ದಲಿತರ ಪ್ರಗತಿಯನ್ನು ಬಗ್ಗುಬಡಿಯಲು ಸಂಚುನಡೆಸುತ್ತಿರುತ್ತದೆ ಎನ್ನುವ ಸೂಚನೆಗಳನ್ನು ಇಲ್ಲಿ ಪಟೇಲನು ಹೇಲಿನ ವಾಸನೆಯ ಮೂಲಕ ಕತೆಗಾರರು ಪ್ರತಿಪಾದಿಸಿದ್ದಾರೆ.

ಹೆಡ್‌ಮಾಸ್ಟರ್‌ರ ಪ್ರೋತ್ಸಾಹ, ಸಹಕಾರಗಳಿಂದ ಶಾಲೆಯ ಕಬ್ಬಡ್ಡಿ ತಂಡವು ಮೇಲ್ದರ್ಜೆಯ ಪ್ರತಿಷ್ಠಿತ ತಂಡಗಳ ಮೇಲೆ ಮೂರು ಪಂದ್ಯಗಳಲ್ಲಿ ಜಯಗಳಿಸಿ ಊರಿಗೆ ಹಿಂದಿರುಗುತ್ತದೆ. ಈ ವಿಜಯವು ದಲಿತ ಹುಡುಗರ ದೊಡ್ಡ ವಿಜಯವಾಗಿ ಕಂಗೊಳಿಸುತ್ತದೆ. ಇಡೀ ಹರಿಜನ ಕೇರಿ ತಮ್ಮ ಹುಡುಗರ ಸಾಮರ್ಥ್ಯ ತಮ್ಮ ಬದುಕಿನ ವಿಜಯವೆಂದು ಸ್ವೀಕರಿಸುತ್ತಾರೆ. ಶೋಷಿತರ ಈ ಗೆಲುವನ್ನು ಊರಿನ ವ್ಯವಸ್ಥೆಯ ಹಿನ್ನಡೆಯ ಸಂಕೇತವಾಗಿಯೂ ಆಗುತ್ತದೆ.

ಒಟ್ಟಾರೆಯಾಗಿ ಮೊಗಳ್ಳಿ ಗಣೇಶ್ ಅವರು ತಮ್ಮ ಅನುಭವದ ಜೊತೆಗೆ ನೈಜವಾದ ತಾಜಾತನದ ಘಟನಾವಳಿಗಳನ್ನು ವಿಭಿನ್ನ ಪಾತ್ರಗಳೊಂದಿಗೆ ಚಿತ್ರಿಸಿ ಹೊಸ ತಾತ್ವಿಕತೆ ಪ್ರತಿಪಾದನೆಗೆ ಕಾರಣವಾಗುತ್ತದೆ.

ಮೊಗಳ್ಳಿ ಅವರ ಕತೆಗಳು ವಿಭಿನ್ನ ತಾತ್ವಿಕತೆಯ ಕೇಂದ್ರ ಬಿಂದುಗಳು ದಲಿತ ಪುರುಷರು ದಲಿತ ಮಹಿಳೆಯರ ಮೇಲೆ ನಡೆಸುವ ದೌರ್ಜನ್ಯ, ಮೇಲ್ವರ್ಗದವರು ದಲಿತರ ಮೇಲೆ ನಡೆಸುವ ದೌರ್ಜನ್ಯ, ಅನಕ್ಷರತೆ, ಅಜ್ಞಾನ, ಅಕ್ಷರ ಕಲಿಯಬೇಕಾದ ಅನಿವಾರ್ಯತೆ, ಸಮಷ್ಟಿ ಪ್ರಜ್ಞೆಯ ಅವಶ್ಯಕತೆ, ಹೊಟ್ಟೆಯ ಹಸಿವು ಮತ್ತು ಜ್ಞಾನದ ಹಸಿವು ಇವೇ ಮೊದಲಾದ ತಾತ್ವಿಕ ನೆಲೆಗಳನ್ನು ಪ್ರತಿಪಾದಿಸುತ್ತವೆ.

## ಅಡಿಟಿಪ್ಪಣಿಗಳು

೧. ಜಿ.ಎಸ್. ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪು.ಸಂ. ೩೬೭
೨. ಜಿ.ಎಸ್. ಆಮೂರ, ಕನ್ನಡ ಕತನ ಸಾಹಿತ್ಯ ಸಣ್ಣಕತೆ, ಪು.ಸಂ. ೩೬೮
೩. ಸಿ.ಎನ್.ರಾಮಚಂದ್ರನ್, ಸಾಹಿತ್ಯ ವಿಮರ್ಶೆ, ಪು.ಸಂ. ೮೬
೪. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪು.ಸಂ. ೩೭೧
೫. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪು.ಸಂ. ೩೭೧
೬. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪು.ಸಂ. ೩೫೮
೭. ಅರವಿಂದ ಮಾಲಗತ್ತಿ (ಸಂ)- ೪೬೬
೮. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪು.ಸಂ ೩೫೯
೯. ಮೊಗಳ್ಳಿ ಗಣೇಶ್, ಕನ್ನೆಮಳೆ, ಪು.ಸಂ. ೧೭೫
೧೦. ಮೊಗಳ್ಳಿ ಗಣೇಶ್- ಕನ್ನೆಮಳೆ, ಪು.ಸಂ.೧೭೫
೧೧. ಅರವಿಂದ ಮಾಲಗತ್ತಿ, (ಸಂ)- ಕನ್ನಡ ವಿಮರ್ಶೆಯ ಮಾರ್ಗ, ಪುಸಂ. ೧೮೨
೧೨. ಅದೇ, ಪು.ಸಂ. ೧೮೪
೧೩. ಅದೇ, ಪು.ಸಂ. ೧೮೪
೧೪. ಅದೇ, ಪು.ಸಂ. ೧೮೪
೧೫. ಅದೇ, ಪು.ಸಂ. ೧೮೪
೧೬. ಮೊಗಳ್ಳಿ ಗಣೇಶ್, ಕನ್ನೆಮಳೆ, ಪು.ಸಂ. ೧೭೫.

*****

# ಅಧ್ಯಾಯ ಆರು

# ಕಥೆಗಳಲ್ಲಿ ವಸ್ತು, ಭಾಷೆ, ತಂತ್ರ

ಕಥಾಸಂಕಲನದಲ್ಲಿ ದಲಿತ ಸಾಹಿತ್ಯವೆಂದರೆ ಬರೀ ರೊಚ್ಚಿನ, ಪ್ರತಿಭಟನೆ ಸಾಹಿತ್ಯವಲ್ಲ. ಇದು ದಲಿತ ಜೀವನದ ಸ್ವರೂಪವನ್ನು ಪ್ರಾಮಾಣಿಕವಾಗಿ ವಸ್ತುನಿಷ್ಠುರತೆಯಿಂದ ಸಾದಾರಪಡಿಸಿ ಓದುಗರಲ್ಲಿ ನಮ್ಮ ಸಮಾಜದ ವ್ಯವಸ್ಥೆಯಲ್ಲಿ ಬೇರುಬಿಟ್ಟಿರುವ ಕ್ರೂರವಾದ, ಅಮಾನುಷವಾದ ಶೋಷಣೆಯ ಬಗ್ಗೆ ಆಳವಾದ ಅರಿವನ್ನು ಹುಟ್ಟಿಸುವಂತಹ ಸಾಹಿತ್ಯವೇ ಇವರ ಮುಖ್ಯವಸ್ತು ಎಂಬುದು ಗಮನಾರ್ಹವಾದುದು.

ಮೊಗಳ್ಳಿ ಗಣೇಶ್ ಅವರು ದಲಿತ ಕಥಾಸಾಹಿತ್ಯದಲ್ಲಿ ವಿಶೇಷವಾಗಿ ಗುರುತಿಸಿಕೊಂಡಿರುವವರು. ಕಾರಣ ಅವರ ಭಾಷೆಯ ಅಭಿವ್ಯಕ್ತಿ ಮಾಧ್ಯಮ. ಇವರು ಗ್ರಾಂಥಿಕ ಭಾಷೆ ಮತ್ತು ಚನ್ನಪಟ್ಟಣದ ಆಡುಭಾಷೆ ಎರಡರಲ್ಲೂ ಸಾಹಿತ್ಯದ ಕೆಲಸವನ್ನು ಮಾಡಿದ್ದಾರೆ. ಇವರ ಕಥೆಗಳು ಸರಳವಾಗಿಯೇ ಓದಿಸಿಕೊಂಡು ಹೋಗುತ್ತವೆ ಹಾಗೂ ಜನಪದ ನಂಬಿಕೆ, ಆಚಾರ, ಸಂಪ್ರದಾಯ, ಜೀವನವಿಧಾನ, ಶೋಷಣೆ, ಅಪಮಾನ, ದಲಿತರ ಬದುಕು ಮುಂತಾದವನ್ನು ಕಟ್ಟಿಕೊಡುತ್ತವೆ.

ತಳಸಂಸ್ಕೃತಿಯ ಮೂಲಬೇರುಗಳನ್ನು ಹಾಗೂ ಸೋಪಜ್ಞತೆಯನ್ನು ಭಾಷೆಯ ಮೂಲಕ ದಲಿತ ಮತ್ತು ಕೆಳವರ್ಗದ ಜನರ ಬದುಕನ್ನು ಕಟ್ಟಿಕೊಟ್ಟಿದ್ದಾರೆ. ಮೊಗಳ್ಳಿ ಅವರ ಬಹುಪಾಲು ಕಥೆಗಳ ವಸ್ತು ಅದರ ಪ್ರಾದೇಶಿಕ ಜನಜೀವನದಿಂದಲೇ ಆಯ್ದುಕೊಂಡಿರುವುದು ಕಂಡುಬರುತ್ತದೆ. ಅಲ್ಲಿನ ನೆಲದ ಸಂಸ್ಕೃತಿ, ದಲಿತರ ನೋವು, ಹತಾಶೆ, ನರಕಗಳೇ ಇವರ ಬರಹದ ಪ್ರಮುಖ ಪ್ರೇರಣೆಗಳಾಗಿವೆ.

ಲೇಖಕರಾದವರು ಪಾತ್ರಗಳು ಮಿಂಚಲಿ, ಮೆರೆಯಲಿ ಎಂದು ಭಾವಿಸುವುದು ಬಹಳ ಅಪರೂಪ, ನೊಂದ, ಶೋಷಿತ, ಅಸಹಾಯಕ ಪಾತ್ರಗಳು ಹಾಗೂ ಅವುಗಳ ಧ್ವನಿ ತಾನೇ ತಾನಾಗಿ ಹೊರಡುತ್ತದೆ. ಇಲ್ಲಿ ಶ್ಲೀಲ ಅಶ್ಲೀಲ ಎನ್ನುವುದು ಗೌಣ. ಭಾಷೆಗೆ ಮಡಿವಂತಿಕೆ ಸಲ್ಲದು. ಮಡಿವಂತಿಕೆಯನ್ನು ರೂಪಿಸಿಕೊಳ್ಳುತ್ತಾ ಹೋದರೆ ಭಾವದ ಸಮರ್ಥ ಅಭಿವ್ಯಕ್ತಿಯಲ್ಲಿ ಆಯತಪ್ಪಿ ಬೀಳುವ ಸಂಭವವೂ ಇರುತ್ತದೆ.

ದಲಿತ ಕಥಾ ಸಾಹಿತ್ಯದ ವಿಶೇಷತೆಗಳಲ್ಲಿ ಭಾಷೆ ಮತ್ತು ಶೈಲಿ ಮುಖ್ಯವಾದುದು. ದಲಿತರು ರೂಪಿಸಿದ ಗದ್ಯ ತಾಯ್ತನದ ಗದ್ಯ. ಇದು ನಿಜಕ್ಕೂ ಕನ್ನಡ ತಾಯಿಭಾಷೆ. ಸ್ತ್ರೀ ಸಂವೇದಿ ಶೈಲಿ, ತಮ್ಮ ಅನುಭವಗಳನ್ನು ಸ್ಥಿತಿಗತಿಗಳಲ್ಲಿ ಕಲೆಯನ್ನಾಗಿಸಬಹುದು ಎಂಬ ಆತ್ಮ

ವಿಶ್ವಾಸ ಬಂದ ದಲಿತರು, ಶಿಷ್ಟ ಕನ್ನಡಕ್ಕೆ ದೂರ ಸಂಬಂಧಿಯಾಗಿ ಉಳಿದಿದ್ದ ಜಾನಪದೀಯವಾದ ಅಚ್ಚದೇಶಿಯ ಕನ್ನಡವನ್ನು ತಮ್ಮ ಅನುಭವಗಳ ಮೂಲಕ ದಾಖಲಿಸಿದ್ದು ಒಂದು ಅಪೂರ್ವ ಸಂಗತಿಯೇ ಆಗಿದೆ.

ಮೊಗಳ್ಳಿ ಗಣೇಶ್ ಅವರ ಕಥೆಗಳ ಭಾಷೆಯ ಶೈಲಿ ತುಂಬಾ ಸಮರ್ಥವಾದದು. ಮೊಗಳ್ಳಿ ಕೇವಲ ಚನ್ನಪಟ್ಟಣ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಭಾಷೆಯನ್ನು ಮಾತ್ರ ನೆಟ್ಟಿಲ್ಲ ಒಟ್ಟು ಕನ್ನಡದ ಗದ್ಯವನ್ನು ತನ್ನ ಸಮುದಾಯದ ಅಭಿವ್ಯಕ್ತಿಗೆ ಅನುಕೂಲಾಗುವ ಹಾಗೇ ಅತ್ಯಂತ ತೀವ್ರ ಸಂವೇದನೆಯಿಂದ ದುಡಿಸಿಕೊಂಡಿರುವುದು ಗಮನಾರ್ಹ ಸಂಗತಿಯಾಗಿದೆ.

ಈ ಬಗ್ಗೆ ರಾಜೇಂದ್ರ ಚೆನ್ನಿ ಅವರು "ಆಧುನಿಕ ಸಂವೇದನೆ ಜೊತೆಗೆ ಉತ್ಕಟವಾದ ಕಾವ್ಯಾತ್ಮಕ ಶೈಲಿಯ ಸಮ್ಮೋಹಿನಿಯ ಕಥೆಗಳು"[೭] ಎಂದು ಮೊಗಳ್ಳಿಯ ಕಥಾಭಾಷೆಯ ಬಗ್ಗೆ ಹೇಳಿರುವುದು ಮಹತ್ವ ಸಂಗತಿಯಾಗಿದೆ. ಮುಂದಿನ ಕಿರಿಯ ತಲೆಮಾರಿನಲ್ಲಿ ಬರುತ್ತಿರುವ ಲೇಖಕರಲ್ಲಿಯೇ ಮೊಗಳ್ಳಿ ಅವರು ಒಂದು ಮಾರ್ಗದರ್ಶಿಯಾಗಬಲ್ಲ ಸತ್ವವುಳ್ಳವರಾಗಿದ್ದಾರೆ. ಕನ್ನಡ ಕಥಾಸಾಹಿತ್ಯ ಕ್ಷೇತ್ರದಲ್ಲಿ ನವೀನತೆಯ ಬರೆಹಗಳನ್ನು, ನೀಡಿರುವ ಮಾದರಿಯು ಗಮನಾರ್ಹವಾದುದಾಗಿದೆ.

ಲೇಖಕರು ಶೋಷಿತರ ಕೇರಿಗಳ ಹಲವು ಘಟನೆ, ವ್ಯಕ್ತಿಗಳ ನಡತೆ ಮತ್ತು ಅವರವರ ಭಾಷೆ ಹಾಗೂ ದಲಿತರ ಜೀವನದ ಲೋಕವೇ ಭಾಷೆಯ ನೆಲ ಬೇರಿನದಾಗಿದೆ. ಕಥೆಗಾರರು ತಮ್ಮ ಕಥಾ ಸಾಹಿತ್ಯದಲ್ಲಿನ ಬಾಷೆಯ ಬಗೆಗಿನ ವಿಚಾರಗಳನ್ನು ಅವರೇ ತಿಳಿಸಿರುವ ನಿಲುವು, ಸಾಧ್ಯತೆಗಳನ್ನು ಇಲ್ಲಿ ಪ್ರಸ್ತಾಪಿಸುವುದು ಹೆಚ್ಚು ಉಪಯುಕ್ತ ಎನಿಸುತ್ತದೆ.

ಇವರ ಕಥೆಗಳಲ್ಲಿನ ಭಾಷೆ ಯಾವ ನಿಟ್ಟಿನಲ್ಲಿ ಉನ್ನತೀಕರಿಸಿವೆ ಎಂದರೆ "ನನ್ನ ಕೇರಿಯ ಭಾಷೆಯೇ ನನ್ನ ನಿಜವಾದ ಕನ್ನಡವಾಗಿತ್ತು. ಆ ಕನ್ನಡದಲ್ಲಿ ನಾನು ಲೋಕದ ಎಲ್ಲವನ್ನೂ ಕಾಣಬಹುದಾಗಿತ್ತು. ಮೂಲದಲ್ಲಿ ಯಾವ ಭಾಷೆಗಳಿಗೂ ಜಾತಿಗಳಿಲ್ಲ, ಆದರೆ ಜಾತಿಗೆ ತಕ್ಕಂತೆ ಅವರವರು ಆಡುವ ನುಡಿಗಳನ್ನು ಜಾಗತೀಕರಿಸಿಕೊಳ್ಳಲಾಗಿರುತ್ತದೆ. ನಮ್ಮ ಕೇರಿಯ ಭಾಷೆ ಕೇವಲ ನಮಗೆ ಮಾತಾಗಿರಲಿಲ್ಲ. ಜೀವನದ ಉಸಿರಾಗಿಯೇ ಇತ್ತು. ಆ ಭಾಷೆಗೆ ಜಗತ್ತಿನ ಯಾವುದೇ ಸಮಾಜದ ಮನುಷ್ಯರನ್ನು ಕೂಡ ಅಂತಃಕರಣದಿಂದ ಅರ್ಥಮಾಡಿಸಿಕೊಡುವ ಸಾಧ್ಯತೆಯನ್ನು ನನಗೆ ಕಲಿಸಿಕೊಟ್ಟಿದೆ. ನಾನು ಬರೆಯುವ ಬರಹದಲ್ಲಿ ಈಗ ಹತ್ತಾರು ವಿಭಿನ್ನ ನೆಲೆಯ ಶೈಲಿಯ ನುಡಿಗಟ್ಟುಗಳು ಬಂದು ಸೇರಿಕೊಂಡಿರಬಹುದು. ಆದರೆ ಬಾಲ್ಯದ ಕೇರಿಯ ಆ ಭಾಷೆಯ ನನ್ನ ಸಂವೇದನೆ, ಅಭಿವ್ಯಕ್ತಿಯ ಸೃಜನಶೀಲತೆಯ ತಾಯ್ತನದ ಬುಡವಾಗಿದೆ.

ಕನ್ನಡದಲ್ಲಿ ಬರೆಯುವ ನನ್ನ ಅನುಭವವೆ ಒಂದು ಪರಮ ಸುಖ. ನಾನು ಕನ್ನಡ ಭಾಷೆಯ ಎಲ್ಲಾ ಕೇರಿಗಳನ್ನು ಉತ್ಕಟವಾಗಿ ಪ್ರೀತಿಸುವೆ, ಆರಾಧಿಸುವೆ. ದಿವ್ಯವಾಗಿ ಮುರಿದು ಕಟ್ಟಿಕೊಳ್ಳುವೆ. ಭಾಷೆಗಳ ಹೊರ ರೂಪವನ್ನು ಭಾವಿಸುವುದಕ್ಕಿಂತ ಆ ಭಾಷೆಗಳ ಮನುಷ್ಯ ಸಂಬಂಧಗಳನ್ನು ತಿಳಿಯಬೇಕು. ಅನ್ಯಾಯ, ಅತ್ಯಾಚಾರ ಎಸಗಿದವನ ಅರ್ಥಕೋಶದಲ್ಲಿ ಆ ಪದಗಳಿಗಿರುವ ಅರ್ಥಕ್ಕೂ ಎಷ್ಟೊಂದು ಅಂತರವಿದೆ ಅಲ್ಲವೆ? ಈ ಅಂತರವನ್ನು ನಿವಾರಿಸಿ ಅಂತಃಕರಣವನ್ನು ಮಿಡಿಸುವುದೇ ನಿಜವಾದ ಭಾಷೆ.

ಸಂವೇದನಾಶೀಲನಾದ ಲೇಖಕ ಯಾವತ್ತೂ ಇಂತಹ ಭಾಷೆಯ ಸಾಧ್ಯತೆಯನ್ನೇ ಕೊನೆತನಕ ಎಷ್ಟು ಸಾಧ್ಯವೋ ಅಷ್ಟನ್ನು ವಿಸ್ತರಿಸುತ್ತಲೇ ಇರುತ್ತಾನೆ. ಹಳಗನ್ನಡ ಕಾಲಘಟ್ಟದಲ್ಲಿ ಪಂಪ, ರನ್ನ, ಮೊದಲಾದವರೆಲ್ಲ ಬಳಸುವ ಮೊದಲೇ ಎಷ್ಟೋ ಕಾಲದಿಂದಲೂ ತಳಜಾತಿಗಳು ಕನ್ನಡವನ್ನು ತಮ್ಮ ಬದುಕಿನಲ್ಲಿ ಭಿತ್ತಿ ಬೆಳೆದು ಜತನವಾಗಿ ಈಗಲೂ ಕಾಯ್ದುಕೊಂಡಿವೆ.

ನಾನು ಕನ್ನಡ ಭಾಷೆಯ ತಾಯಿ ಬೇರಿನಿಂದ ಬಂದವನು ಇಂತಹ ತಾಯಿ ಬೇರಿನ ಸಂಬಂಧಗಳಿಂದಲೇ ನಾನು ಕನ್ನಡದ ಬೇರೆ ಬೇರೆ ಕೇರಿಗಳನ್ನೆಲ್ಲ ನನ್ನ ಕಾಲದ ಅರಿವಿನ ಭಾಗವಾಗಿ ಅಳವಡಿಸಿಕೊಂಡಿರುವುದು ಅಲ್ಲದೆ ನೊಬೆಲ್ ಪ್ರಶಸ್ತಿ ಪಡೆದ ಗುಂಥರ್ ಗ್ರಾಸ್ ಜೊತೆ ಭೇಟಿಯಾದಾಗ ನಾನು ಬರೆದದ್ದೆಲ್ಲ ಇಂಗ್ಲಿಷಿನಲ್ಲಿ ಇದ್ದಿದ್ದರೆ ಎಷ್ಟು ಚಂದವಿತ್ತು ಎಂದು ಬೇಸರಿಸಿದೆ. ಗುಂಥರ್ ಗ್ರಾಸ್ ತಡೆದು ಹೇಳಿದರು; ನಾವು ಹುಟ್ಟಿ ಬೆಳೆದುಬಂದ ಭಾಷೆ ಒಂದೇ ಲೇಖಕರಾದವರಿಗೆ ಇರುವ ಏಕೈಕ ಭಾಷೆ. ಅದರಲ್ಲಿಯೇ ನಾವು ಬದುಕಬೇಕು, ಬರೆಯಬೇಕು, ಸಾಯಬೇಕು. ಇಲ್ಲಿನ ಈ ವಿಶ್ವ ಲೇಖಕರ ಪುಸ್ತಕ ಮೇಳಕ್ಕೆ ನಿನ್ನನ್ನು ಕರೆದುಕೊಂಡು ಬಂದದ್ದು ಇಂಗ್ಲಿಷ್ ಭಾಷೆಯಲ್ಲ. ನೀನೇ ನಿನ್ನ ಮಾತೃಭಾಷೆಯಲ್ಲಿ ಬರೆದದ್ದು ಮಾತ್ರವೇ ನಿನ್ನನ್ನು ಇಲ್ಲೀ ತನಕ ಬರಮಾಡಿಕೊಂಡಿದೆ."[೨]

ಮೊಗಳ್ಳಿ ಅವರ ಭಾಷೆಯಲ್ಲಿ ಹೊಂದಿದ್ದ ಅಂತಃ ಸಂಬಂಧವನ್ನು ಕಾಣಬಹುದು. ಮೊಗಳ್ಳಿಯವರು ಹೀಗೆ ಹೇಳುವಾಗ ತಮ್ಮ ಕೇರಿಯ ಜನರ ಭಾಷೆ ಎಷ್ಟು ಮಹತ್ವದ್ದು ಎಂಬುದನ್ನು ತೋರಿಸುತ್ತಾರೆ. ಕಥೆಗಾರರು ಬಳಸಿರುವ ಭಾಷೆ, ಗ್ರಾಮ್ಯ ಸೊಗಡಿನ ದಲಿತ ಸಂಸ್ಕೃತಿಯ ಜನರಾಡುವ ಸೊಬಗಿನ ಭಾಷೆ, ಕೆಳವರ್ಗದ ಜನರ ಜೀವನದ ರೀತಿನೀತಿಗಳು ಅವರ ಭಾಷೆಯಿಂದಲೇ ಅರಿವಾಗುತ್ತದೆ.

ಆ ಜನರು ಜೀವನವನ್ನು ಕಂಡುಕೊಂಡಿರುವ ಬಗೆ, ಮಣ್ಣಿಗೆ ಹತ್ತಿರವಾದ ಬದುಕು ಅವರು ವ್ಯವಹರಿಸುವ ರೀತಿ ಎಲ್ಲವೂ ಭಾಷೆಯಲ್ಲಿಯೇ ಅಭಿವ್ಯಕ್ತಗೊಂಡಿದೆ. ಲೇಖಕರು

ಕೆಲವೊಂದು ಪಾತ್ರಸೃಷ್ಟಿಯಲ್ಲಿ ಎಷ್ಟು ಲಕ್ಷ್ಯವಹಿಸಿದ್ದಾರೋ ಅಷ್ಟೇ ಗಮನವನ್ನು ಆಯಾ ಪಾತ್ರಗಳ ತಂತ್ರಗಾರಿಕೆಯ ರಚನೆಯಲ್ಲಿ ಕಾಣಬಹುದು. ಭಾಷೆಯ ಬಳಕೆಯಲ್ಲಿ ಇದು ಉತ್ತಮ, ಇದು ನೀಚ ಎಂದು ಚಿಂತಿಸಲು ಸಾಧ್ಯವಿಲ್ಲ. ಅವರವರ ಬದುಕು ಮತ್ತು ಪರಿಸರ ಅವರ ಭಾಷೆಯನ್ನು ನಿರ್ಧರಿಸುತ್ತದೆ.

ಗ್ರಾಮೀಣ ದಲಿತ ಜನರ ಚಿತ್ರಣ ಮಾಡುವಾಗ ಶಿಷ್ಟಭಾಷೆ ಬಳಸಲು ಸಾಧ್ಯವಿಲ್ಲ. ಅಲ್ಲಿನ ಜನತೆಯ ಭಾಷಾ ಬಳಕೆಯೆ ಹೆಚ್ಚು ಅರ್ಥಪೂರ್ಣವಾದದ್ದು. ಅಂತಹ ಅರ್ಥಪೂರ್ಣತೆಯನ್ನು ಕಥೆಗಾರರು ವಿಭಿನ್ನ ನೆಲೆಗಳಲ್ಲಿ ಆಯಾ ಪಾತ್ರಗಳ ಮೂಲಕ ನೆಲದ ಸಂಸ್ಕೃತಿಯನ್ನು ಬಿಂಬಿಸುವ ಭಾಷಾ ಬಳಕೆಯನ್ನು ಅಭಿವ್ಯಕ್ತಿಸಿದ್ದಾರೆ.

ಇವರ ಕಥೆಗಳಲ್ಲಿ ಗ್ರಾಮೀಣ ಜನರ ಬದುಕು, ದಲಿತರ ಮೇಲಿನ ಶೋಷಣೆ, ಅಪಮಾನ, ಶೋಕ, ಹತಾಶೆ ಇವೆಲ್ಲವನ್ನು ಭಾಷೆಯ ಮೂಲಕ ಕಟ್ಟಿಕೊಡುವ ಒಂದು ಗುಣ ಅನುಭವದಿಂದ ಬಂದಂತಹ ಕೆಲವರಿಗೆ ಮಾತ್ರ ಸಾಧ್ಯ. ಕಥೆಗಾರರ ಭಾಷೆ ಬಳಕೆಯು ಈ ದೃಷ್ಟಿಯಿಂದ ಮುಖ್ಯವಾಗುತ್ತದೆ.

ದಲಿತ ಜನರ ಭಾಷೆಯು ನಿತ್ಯಜೀವನದಲ್ಲಿ ಬೈಗುಳಗಳ ಸಮ್ಮಿಶ್ರಣದಿಂದಲೇ ಕೂಡಿರುತ್ತದೆ. ಇಲ್ಲಿ ಲೇಖಕರು ತಮ್ಮ ಬರವಣಿಗೆಯಲ್ಲಿ ಯಥಾವತ್ತಾದ ಪ್ರಾದೇಶಿಕ ಆಡುನುಡಿಯಲ್ಲಿ ತಂದಿದ್ದಾರೆ. ಒಂದು ಪ್ರದೇಶದ ಜನರ ಸಂಸ್ಕೃತಿ, ಆಚಾರವಿಚಾರಗಳ ವೈಶಿಷ್ಟ್ಯತೆಯನ್ನು ಒಪ್ಪುವಂತೆ ಅಲ್ಲಿನ ಭಾಷೆಯನ್ನು ಒಪ್ಪಲೇಬೇಕು. ಇದನ್ನು ಶ್ಲೀಲ, ಅಶ್ಲೀಲ ಎಂದು ದೂರುವುದು ಸಮಂಜಸವಲ್ಲ. ಭಾಷೆ ಮತ್ತು ಸಮಾಜ ಬೇರೆಬೇರೆಯಲ್ಲ, ಸಮಾಜದ ತಳಹದಿ ಭಾಷೆ, ಮನುಷ್ಯರ ಆಲೋಚನೆಗಳು ವ್ಯಕ್ತರೂಪ ಪಡೆಯುವುದು ಭಾಷೆಯಿಂದಲೇ ಸಮಾಜದ ನಂಬಿಕೆಗಳನ್ನು ಆಧರಿಸಿದಯೇ ಭಾಷೆಯು ಅರ್ಥ ಪಡೆಯುವುದು. ಅರ್ಥದ ಸ್ತರಗಳು ಬಹುರೂಪಿಯಾದವು. ಕನ್ನಡ ಭಾಷೆಯು ಒಂದೇ ಆಗಿದ್ದರೂ ಆ ಭಾಷೆಯ ಅರ್ಥ ವಲಯಗಳು ಅನೇಕ ಬಗೆಯ ಸಾಮಾಜಿಕ ಹಾಗೂ ಸಾಂಸ್ಕೃತಿಕವಾದ ಪರಿಸರದಿಂದ ವಿಭಿನ್ನಗೊಳ್ಳುತ್ತವೆ.

ಕನ್ನಡ ಭಾಷೆಯು ದಲಿತ ಸಮುದಾಯಗಳ ಬದುಕಿನ ಸಂಬಂಧಗಳ ನೆಲೆಯಲ್ಲಿ ಅನೇಕ ಬಗೆಯ ಅಂತರಗಳನ್ನು ಅರ್ಥ ಸೂಚಕದ ಕ್ರಮಗಳನ್ನು ಮತ್ತು ತಾರತಮ್ಯಗಳನ್ನು ಅನುಸರಿಸಿಕೊಂಡು ಬಂದಿದೆ. ಆದರೆ ಸಾಮಾಜಿಕ ಸಂವಹನದಲ್ಲಿ ಜಾತಿ ಸೂಚಕವು ಅಂತರ್ಗತವಾಗಿ ಬೆಸುಗೆಯಾಗಿದೆ. ಜಾತಿ ಹಾಗೂ ಲಿಂಗ ತಾರತಮ್ಯಗಳು ಯಾವ ಬಗೆಯ ಸಂವಹನ ಹಾಗೂ ಶ್ರೇಣೀಕೃತ ಅರ್ಥಗಳನ್ನು ಹಾಗೂ ಸಾಮಾಜಿಕ ಅಧಿಕಾರ ಕೇಂದ್ರಗಳನ್ನು

ಅಳವಡಿಸಿಕೊಂಡಿವೆ ಎಂಬುದನ್ನು ಇಲ್ಲಿ ವಿಶೇಷವಾಗಿ ಪರಿಶೀಲಿಸಬಹುದು. ಕಥೆಗಾರರು ಕಾಳಿ, ಬತ್ತ, ಕಿಚ್ಚು, ಬಾಳು ಮುಂತಾದ ಕಥೆಗಳಲ್ಲಿ 'ಅನ್ನ'ದ ಪರಿಕಲ್ಪನೆಯನ್ನು ಬಿತ್ತುತ್ತಾರೆ. ಅನ್ನ ಎಂಬ ಅರ್ಥ ದಲಿತ ಕುಟುಂಬಗಳಲ್ಲಿ ಅನೇಕ ಬಗೆಯ ಭಾವನೆಗಳನ್ನು ಉಂಟುಮಾಡುತ್ತದೆ.

ಅನ್ನದ ಜೊತೆಗಿನ ಸಂಬಂಧಗಳು ತೆರೆದುಕೊಳ್ಳುತ್ತವೆ. ಅನ್ನದ ಅರ್ಥ ಹೊಟ್ಟೆ ತುಂಬಿದ ಸಮಾಜದ ಭಾವನೆಗಳಿಗೆ ಕಂಡ ರೀತಿಯಂತೆಯೇ ಹಸಿದ ಹೊಟ್ಟೆಯ ದಲಿತರಿಗೆ ಕಾಣಲು ಸಾಧ್ಯವಿಲ್ಲ. ಇಲ್ಲಿ ಅನ್ನದ ಹಸಿವು, ಅಪಮಾನ, ಹತಾಶೆ, ಸಂಕಟ ಹಾಗೂ ಕನಸುಗಳು ಎದ್ದು ನಿಲ್ಲುತ್ತವೆ.

ಭಾಷೆಯಲ್ಲಿ ಅರ್ಥವನ್ನು ವಸ್ತುವಿನಿಂದ ಗ್ರಹಿಸಿ ವಿವರಿಸಲಾಗುತ್ತದೆ. ಆ ನಿಟ್ಟಿನಲ್ಲಿ ಪೂರಕವಾಗಿ ಮುಡ್ನಾಕೂಡು ಚಿನ್ನಸ್ವಾಮಿಯವರ 'ಚಪ್ಪಲಿ ಮತ್ತು ನಾನು' ಎಂಬ ಕವಿತೆಯನ್ನು ಇಲ್ಲಿ ಗಮನಿಸಬೇಕು. ಇಲ್ಲಿ ಭಾಷಾ ಬಳಕೆಯು, ಚಪ್ಪಲಿ ಎಂಬ ರೂಪಕವು ನಿಷೇಧಿತ ರೂಪಕವಾಗಿ ಅನೇಕರಿಗೆ ಅನಿಸಿದ್ದರೆ ಸ್ವತಃ ದಲಿತ ಸಮಾಜದ ಕವಿಗೆ ಚಪ್ಪಲಿಯು ಚಹರೆಯೂ ಆಗಬಲ್ಲದು. ಹಾಗೆಯೇ ತನ್ನ ಪ್ರತಿಭಟನೆಯ ಸಂಕೇತವೂ ಆಗಬಲ್ಲದು. ಬೇರೆಯವರಿಗೆ ಚಪ್ಪಲಿಯು ಕೀಳು ರೂಪವಾದರೆ ದಲಿತರಿಗೆ ಅದು ಪವಿತ್ರ ರೂಪಕವೂ ಆಗಬಲ್ಲದು.

ಭಾಷೆಯಲ್ಲಿ ಭಾವನೆಗಳಿಗೆ ಹೆಚ್ಚು ಸ್ವಾತಂತ್ರ್ಯವಿರಬೇಕು ಹೊರತು, ಆ ಭಾಷೆಯ ತರ್ಕಗಳಿಗಲ್ಲ ಅಥವಾ ಆ ಭಾಷೆಯ ವ್ಯಾಕರಣಕ್ಕಲ್ಲ. ಭಾಷೆಯು ಧರ್ಮ ಮತ್ತು ಜಾತಿಗಳ ಅಳತೆಗನುಗುಣವಾಗಿ ಸಾಗಬೇಕಾದ್ದಿಲ್ಲ. ಹಾಗೆ ನಡೆದಿದ್ದರಿಂದಲೇ ಸಂಸ್ಕೃತ ಭಾಷೆಯು ಮೃತವಾದುದು. ಭಾಷೆಯ ಹೊರ ಮೈ ಮಾತ್ರ ನಾಗರಿಕವಾಗಿದ್ದರೆ ಸಾಲದು, ಅದರ ಅಂತರಂಗವು ಶುದ್ಧಿಯಿಂದಿರಬೇಕು. ಹೀಗೆ ಭಾಷೆಯ ಬಗೆಗೆ ವಿಭಿನ್ನ ನೆಲೆಗಳನ್ನು ಶೋಧಿಸಬಹುದು.

ಕಥೆಗಳಲ್ಲಿ ಲೇಖಕರು ತಮ್ಮದೇ ಆದ ವಿಶಿಷ್ಟ ತಂತ್ರಗಾರಿಕೆಯನ್ನು ಕಂಡುಕೊಂಡಿರುವುದು ಅವರ ಕೌಶಲ್ಯ ಮತ್ತು ಸೃಜನಶೀಲತೆಯನ್ನು ತೋರ್ಪಡಿಸುತ್ತದೆ. 'ಒಂದು ಹಳೆ ಚಡ್ಡಿ' ಕಥೆಯಲ್ಲಿ ಚಡ್ಡಿನೇ ವಸ್ತುವಾಗಿ ಕತೆ ಹೆಣೆಯಲ್ಪಡುವುದು ಅವರ ತಂತ್ರವಾಗಿದೆ.' 'ಅಲ್ಲಿ ಅ ಅಳು ಈಗಲೂ' ಕಥೆ ಒಂದು ಅಳುವನ್ನೇ ಕೇಂದ್ರವಾಗಿ ತಮ್ಮ ಚುರುಕುತನವನ್ನು ಹೇಳಲ್ಪಡುತ್ತದೆ.

'ಪಟೇಲ' ಕಥೆಯಲ್ಲಿ ಕುಂಟ ಮತ್ತು ಮಾಸ್ಟರ್ ಅವರ ಪಾತ್ರದ ಮುಖಾಂತರ, 'ಬಾಡೂಟ'ದಲ್ಲಿ ಬಾಡು, 'ಭತ್ತ' ಕಥೆಯಲ್ಲಿ ಸುಗ್ಗಿಯಲ್ಲಿ ಭತ್ತ ಕೊಯ್ಯುವ ಹಿಂದಿನ ದಿನ ಕಳ್ಳಸಾಗಾಣಿಕೆ, 'ತಣಿಗೆ' ಅಜ್ಜನ ಆಸೆ, ಆಸ್ತಿಯಾಗಿದ್ದ ತಣಿಗೆ. 'ಬುಗುರಿ'ಯಲ್ಲಿ ಚಲುವನ ಬುಗುರಿ ಕಕ್ಕಸ್ಸು ಗುಂಡಿಗೆ ಬೀಳುವುದೇ, ಹೀಗೆ ಮುಂತಾದ ಕಥೆಗಳಲ್ಲಿನ ವಿಭಿನ್ನ ನೆಲೆಯಲ್ಲಿ ಸಂವೇದಕರು ತಮ್ಮ ಕಥಾ ತಂತ್ರಗಾರಿಕೆಯನ್ನು ಬಳಸಿ ಉತ್ತಮ ಕತೆಗಳನ್ನು ಬರೆದಿದ್ದಾರೆ.

ಇವರದೇ ಕಥೆಯಾದ 'ಕಿಚ್ಚು' ಕಥೆಯಲ್ಲಿ ಬರವು ಬೋರಮ್ಮ ತನ್ನ ಕೋಳಿ ಕಳುವಾದಾಗ 'ಯಾವ್ ನನ್ ಸವುತಿಮಕ್ಳು ಕೋಳಿ ಹಿಡ್ಕಂಡಿದ್ದೀರೋ ಬಿಟ್ಬುಡಿ. ಇಲ್ದೆ ಇದ್ರೆ ದೇವ್ರಿಗೆ ಹಣ ಕಟ್ಟಿಸಿ ರಕ್ತ ಕಕ್ಕಿಸ್ ಬುಡ್ತಿನಿ' ಆಳ್ ಬಸ್ತಿ ಜನ ಯಾವುದನ್ನೂ ವುಳಿಸ್ ಕೊಡೋಲ್ವಲ್ರಪ್ಪಾ'[೩] ಎಂದು ಬೈಯುವ ಈಕೆ ಅಂದಿನ ಪರಿಸರದ ಜನರ ಸಂಸ್ಕೃತಿಯ ಭಾಷಾಪರಿಯನ್ನು ಉದಾರಿಸಬಹುದು.

ಮತ್ತೊಂದು ಕಥೆ 'ಬಾಡೂಟ' ಕಥೆಯಲ್ಲಿ ಬೈಗುಳದ ಜೊತೆಗೆ ಹೆಣ್ಣು ಹೆಣ್ಣುಗಳ ನಡುವಿನ ಜಂಜಾಟವನ್ನು ಇಲ್ಲಿ ಕಾಣಬಹುದು. "ನಿನ್ನಂತೋಳು ಇದ್ರೆ ಒಂದ್ ಮನೆಯಲ್ಲಾ ಯಿಡೀ ವೂರೇ ಯಕ್ಕುಟ್ಟೋಯ್ತದೆ ಎನ್ನುತ್ತಾ ಮನೆ ಮುರುಕಿಯಾಗಿ ಬಂದು ಅವತಾರ ಆಡ್ತಾಳೆ ಎಂದು ಕೆಕ್ಕರಿಸಿಕೊಂಡು ನೋಡಿದಳು ಗಂಡನ್ ಮನೆಲು ಇಂಗೇ ಮಾತಾಡು, ಕಬ್ಣ ಕಾಯ್ಸಿ ಬಾಯಿಗೆ ಇಡ್ತಾರೆ' ವತಾರಿಂದ ನಾನೂ ನೋಡ್ತಾನೆ ಅವ್ನಿ ಯೆಷ್ಟಿದ್ದದು ನನ್ ಮ್ಯಾಲೆ ನಿನ್ ಕಿಚ್ಚು, ಯಾವ್ ದೇವ್ರೂಪ್ಪನು ನೀನಾಡೊ ಮಾತ್ಗಳ ಅನ್ನಾಯ್ ಕಾತಿ ಸುಮ್ನಿರು ನನ್ ತ್ರಾಣದ ಕೆಣುಕ್ ಬ್ಯಾಡ್"[೪] ಎಂದು ಮಾತಿಗೆ ಮಾತು ಬೆಳೆಸುವ ಮಾದೇವಿ ಮತ್ತು ಸಾಕಿ ಇಬ್ಬರ ವೈಮನಸ್ಸು ಚಿತ್ರಿಸುವ ಭಾಷೆ ಬೈಗುಳಸ ಮೂಲ ರೂಪಿತವಾಗುತ್ತದೆ.

ಇನ್ನೂ ಮುಂತಾದ ಕಥೆಗಳಲ್ಲಿ ಕತೆಗಾರರು ಭಾಷಾ ವೈಖರಿಯನ್ನು ಅಗಾಧವಾಗಿ ಬಳಸಿದ್ದಾರೆ. ವಿಶಿಷ್ಟವಾದ ಕಥಾ ತಂತ್ರಗಾರಿಕೆ ಹೊಂದಿರುವ 'ಆ ಹೆಂಗಸು' ಎಂಬ ಕಥೆಯಲ್ಲಿ ಒಬ್ಬ ವಿಧವೆ ಹೆಂಗಸು ಜೀವನ ಸಾಗಿಸುವ ತಂತ್ರಗಾರಿಕೆ ಆ ಊರಿನಲ್ಲಿ ಪೂಜಾರಿಯು ತನ್ನ ಕಾಮದ ಬಯಕೆ ಈಡೇರಿಕೆಗಾಗಿ ದೈವತ್ವದ ಕಲ್ಪನೆಯಲ್ಲಿ ವಿಧವೆಯಾದ ಕೆಂಪಿಯನ್ನು ಕೂಡಲು ಸಂಚುಹಾಕುತ್ತಿರುವಾಗ, ಕೆಂಪಿ ಕಲಿತಿರುವ ಸರಳ ವಿದ್ಯೆ ಚುರುಕು ಸೊಪ್ಪನ್ನು ಮೈಗೆಲ್ಲ ಬಳಸುವ ಮುಖಂತರ ಕಥೆಯಲ್ಲಿ ಬರುವ ಗೌಡ, ಗವಿಮಠದ ಸಿದ್ದ ಇವರಿಗೆಲ್ಲ ಧೈರ್ಯದ ಸಾಹಸ ಮತ್ತು ತನ್ನ ಹೆಣ್ತನ, ಶೀಲ ಉಳಿಸಿಕೊಳ್ಳುವ ತಂತ್ರಗಾರಿಕೆಯನ್ನು ಮೊಗಳ್ಳಿ ಗಣೇಶ್‌ರವರ ಕಥೆಗಳಲ್ಲಿ ಇನ್ನೂ ಹಲವು ನೆಲೆಗಳಿಂದ ಗ್ರಹಿಸಬಹುದು.

## ಅಡಿಟಿಪ್ಪಣಿಗಳು


೧. ಅರ್ಜುನ ಗೋಳಸಂಗಿ, ಕನ್ನಡ ದಲಿತ ಸಾಹಿತ್ಯ; ಸಮಾಲೋಕನ, ಪು.ಸಂ. ೬೫

೨. ಮೊಗಳ್ಳಿ ಗಣೇಶ್, 'ಜಾತಿ ಮೀಮಾಂಸೆ', ಪು.ಸಂ. ೧೬೯

೩. ಮೊಗಳ್ಳಿ ಗಣೇಶ್, ಮೊಗಳ್ಳಿ ಕತೆಗಳು, ಪು.ಸಂ. ೩೦

೪. ಮೊಗಳ್ಳಿ ಗಣೇಶ್, ಮೊಗಳ್ಳಿ ಕತೆಗಳು, ಪು.ಸಂ. ೬೫

# ಉಪಸಂಹಾರ

ಮೊಗಳ್ಳಿ ಗಣೇಶ ಅವರು ಯುವ ಪೀಳಿಗೆಗೆ ತಮ್ಮ ಕತೆಗಳಲ್ಲಿ ಕಾಣುವ ಕಥಾವಸ್ತುಗಳು, ದಲಿತ ಸಂವೇದನೆ, ಅಳವಾದ ಧ್ವನಿಯಾದರು, ಅವು ಕೇವಲ ಅಲ್ಲೆ ನಿಲ್ಲದೆ ಅದನ್ನು ಮೀರಿಕೊಂಡು ಸಮುದಾಯದ ಪ್ರಜ್ಞೆಯ ಕಡೆಗೆ ಸಾಗುತ್ತದೆ ಎಂಬ ತಾತ್ವಿಕತೆಯನ್ನು, ಹೊಸ ಪೀಳಿಗೆಯಲ್ಲಿ ಭರವಸೆ ಹುಟ್ಟಿಸುವ ಒಬ್ಬ ಸಾಮಾಜಿಕ ಬದಲಾವಣೆಯ ಕತೆಗಾರರಾಗಿರುವುದು ವಿಶೇಷವಾಗಿದೆ.

ದಲಿತ ಬದುಕನ್ನು ನೋಡುವ ಮತ್ತು ಅಭಿವ್ಯಕ್ತಿಸುವ ರೀತಿ ನಿಜಕ್ಕೂ ತಾಯ್ತನದ ಸಂವೇದನೆಯಾದ ಸ್ವರೂಪವನ್ನು ಪುಷ್ಟೀಕರಿಸುತ್ತದೆ. ಸಹೃದಯರ ಅಂತಃಕರಣವನ್ನು ಮುಟ್ಟಿ ಆರೋಗ್ಯಕರವಾದ ಚಿಂತನೆಗೆ ಗುರಿಮಾಡುವ ಶಕ್ತಿಯುಳ್ಳ ಜನಪರ ಕಾಳಜಿಗಳನ್ನು ತೋರಿಸುವ ಲೇಖಕರ ಸೃಜನಶೀಲತೆಯು ಬಲು ವಿಶಿಷ್ಟವಾದದು ಎಂಬುದನ್ನು ಸಾಬೀತುಪಡಿಸುತ್ತದೆ. ಇವರ ಬಹುಪಾಲು ಕಥೆಗಳು ಅಪಾರವಾದ ಸ್ತ್ರೀಪರ ಕಾಳಜಿಯನ್ನು ಮಹಿಳಾ ಸಂವೇದನೆಯ ಹಿನ್ನೆಲೆಯಲ್ಲಿ ಒಡಮೂಡಿರುವುದು ಎದ್ದು ತೋರುತ್ತದೆ.

ಪ್ರಮುಖವಾಗಿ ಸ್ತ್ರೀ ಸಮಸ್ಯೆ, ಸವಾಲುಗಳು ಎಂದರೆ ಸ್ತ್ರೀಯರು, ಮೇಲ್ವರ್ಗದ ಪುರುಷರಿಂದ, ತಮ್ಮ ಕುಟುಂಬ ಪುರುಷರಿಂದಲೂ ಶೋಷಣೆಗೆ ಒಳಗಾಗಿ ಅವಳು ಬದುಕನ್ನು ಕಟ್ಟಿಕೊಳ್ಳಲುಪಡುವಂತಹ ಕಷ್ಟ ಎಲ್ಲವನ್ನೂ ಎದುರಿಸಿ ನಿಲ್ಲುವ ಗುಣ ಆಕೆಗೆ ಈ ಮಣ್ಣಿನಿಂದಲೇ ಬಂದಿರುವುದು. ಆಕೆ ತನ್ನ ಅಗತ್ಯ ಮತ್ತು ಅನಗತ್ಯಗಳ ನಡುವೆಯು ಕೂಡ ತನ್ನ ಗಟ್ಟಿತನವನ್ನು ತೋರಿಸುತ್ತಾಳೆ. ಈ ನಿಟ್ಟಿನಲ್ಲಿ ಕತೆಗಾರರು ಮಹಿಳೆಯರ ಬದುಕನ್ನು ಬಲಪಡಿಸಿರುವುದು ಮುಂದೆ ಬರುವ ಹೆಣ್ಣುಮಕ್ಕಳಿಗೆ ಮಾದರಿಯಾಗುತ್ತದೆ. ಹಾಗೆಯೇ ಹೆಣ್ಣಿಗೆ ಆಗುವ ಎಲ್ಲಾ ಅನುಭವಗಳನ್ನು ಮೊಗಳ್ಳಿಯವರು ಲೀಲಾಜಾಲವಾಗಿ ಅಭಿವ್ಯಕ್ತಿಸುತ್ತಾರೆ.

ಕಥೆಗಳಲ್ಲಿ ಹಳ್ಳಿಯ ಶೂದ್ರದಲಿತ ಜಗತ್ತಿನ ಬದುಕು ಕೂಡ, ನೋವಿನ ಮೊನಚುಮುಳ್ಳುಗಳ ನಡುವೆಯೇ ಅರಳುತ್ತದೆ. ಇಲ್ಲಿ ಶೋಷಣೆ, ಕ್ರೌರ್ಯ, ದರ್ಪ, ದಬ್ಬಾಳಿಕೆಗೆ ಹೆದರುತ್ತ, ಕೆಲವೊಮ್ಮೆ ಸಂಘರ್ಷಕ್ಕಿಳಿಯುತ್ತ ಈ ಮಂದಿ ಜೀವಿಸುತ್ತಾರೆ. ಈ ವ್ಯವಸ್ಥೆಯ ನಡುವೆ ಅಮಾಯಕ, ಅನಕ್ಷರಸ್ಥ ದಲಿತ ಕೇರಿಗಳ ಮಂದಿಯ ಬದುಕು, ಕಂಬನಿ ಕೂಡಿದ್ದು ನಳನಳಿಸುತ್ತಿರುತ್ತದೆ.

ನೋವುಂಡ ದಲಿತ ಮಹಿಳೆಯರ ಮತ್ತು ಮಕ್ಕಳು, ಪ್ರಾಣಿಗಳ ಚಿತ್ರಣವನ್ನು ಕಥೆಗಾರರು ತಮ್ಮ ಆತ್ಮದ ಅಂತರಾಳದಿಂದ ನೋಡಿರುವ ಕ್ರಮ ಭಿನ್ನವಾದುದು. ಮೊಗಳ್ಳಿಯವರು ಕಥೆಗಳಲ್ಲಿನ ಭಾಷೆ ವಿಶಿಷ್ಟವಾದುದು. ದಲಿತ ಸಮುದಾಯದವರು ಆಡುವ ದೈನಂದಿನ ಆಡುಭಾಷೆ, ಬೈಗುಳದ ಭಾಷೆ ಮತ್ತು ಶಿಷ್ಟ ಸಮುದಾಯದ ಶಾಸ್ತ್ರಬದ್ಧವಾದ ಭಾಷೆಯನ್ನು ಏಕಕಾಲಕ್ಕೆ ಮಾಂತ್ರಿಕ ರೂಪದಲ್ಲಿ ಬಳಸುತ್ತಾರೆ.

ಬಾಲ್ಯದ ತನ್ನ ಕೇರಿಯ ಆಚಾರ–ವಿಚಾರ, ನಂಬಿಕೆ, ಸಂಪ್ರದಾಯ ಒಟ್ಟಾರೆ ಜನರ ಬದುಕನ್ನು ಸಾಂಸ್ಕೃತಿಕ ವಿಭಿನ್ನ ನೆಲೆಯಲ್ಲಿ ನೋಡುವ ಮತ್ತು ಕಟ್ಟಿಕೊಡುವ ಗುಣ ಮೊಗಳ್ಳಿ ಗಣೇಶ್ ಅವರ ಕಥೆಗಳಲ್ಲಿ ಪ್ರಧಾನವಾಗಿ ಗೋಚರಿಸುತ್ತದೆ.

ಒಟ್ಟಾರೆ ಕಥೆಗಳಲ್ಲಿ ದಲಿತ ಕೇರಿಗಳ ಬದುಕು ಬವಣೆಗಳನ್ನು ವಿಭಿನ್ನ ನೆಲೆಗಳಲ್ಲಿ ಕಾಣುತ್ತೇವೆ. ಮೊಗಳ್ಳಿ ಗಣೇಶ್ ಅವರು ಕಥೆಗಳಲ್ಲಿ ಸಾಮಾಜಿಕ ಅರಿವು ಮೂಡಿಸಿರುವ ಎಲ್ಲಾ ಅಯಾಮದಿಂದಲೂ ಅಧ್ಯಯನಕ್ಕೆ ಸೂಕ್ತವೆನಿಸಿ, ಈ ಸಂಶೋಧನ, ಸಂಪ್ರಬಂಧವನ್ನು ಕೈಗೊಳ್ಳಲು, ಇಂದಿನ ಕಾಲಘಟ್ಟಕ್ಕೆ ಹೊಸತನದ ಅರಿವನ್ನು ಮೂಡಿಸುವ ಕಥೆಗಾರರ ಚಿಂತನೆಯನ್ನು ಶೋಧನೆಗೆ ಗುರಿಪಡಿಸಲಾಗಿದೆ.

ಮೊಗಳ್ಳಿ ಅವರ ಕಥೆಗಳನ್ನು ಈ ಪ್ರಬಂಧದ ಕಾಲ ಮತ್ತು ಸೀಮಿತ ಪರಿಮಿತಿಯೊಳಗೆ ಶೋಧಿಸುವ ಕ್ರಮ ಇಲ್ಲಿಯದಾಗಿದೆ. ಅವರ ಕಥೆಗಳು ಇನ್ನೂ ಬಹುಮುಖಿ ನೆಲೆಯ ಸಂಶೋಧನೆಯನ್ನು ಅಪೇಕ್ಷಿಸುತ್ತವೆ. ಸಂಶೋಧಕರಿಗೆ ಆಸಕ್ತಿಕರವಾದ ಹತ್ತು ಹಲವು ವಸ್ತು ವಿಷಯಗಳನ್ನು ಮೊಗಳ್ಳಿ ಗಣೇಶ ಅವರ ಕಥೆಗಳು ಒಳಗೊಂಡಿವೆ ಎಂದರೆ ತಪ್ಪಾಗಲಾರದು.

ಇವರ ಸಾಹಿತ್ಯ ಕೃಷಿ ಈ ನೆಲದ ಸಂವೇದನೆಯನ್ನು ವಿವಿಧ ಆಯಾಮಗಳಲ್ಲಿ ಓದುಗರಿಗೆ ನೀಡುವಂತಹದ್ದು. ಬಹುಮುಖಿ ಪ್ರತಿಭೆಯ ಮೊಗಳ್ಳಿ ಗಣೇಶ್ ಇಂದಿನ ಸಾಹಿತ್ಯ ಸಂದರ್ಭದಲ್ಲಿ ಅತ್ಯಂತ ಭರವಸೆಯ ಹೆಸರು. ಬುಗುರಿ ಮೂಲಕ ಕನ್ನಡ ಕಥಾಸಾಹಿತ್ಯವನ್ನು ವಿಶಿಷ್ಟವಾಗಿ ಪ್ರವೇಶಿಸಿದ ಮೊಗಳ್ಳಿ ಇವತ್ತು ಕೇವಲ ಕಥೆಗಾರರಾಗಿ ಉಳಿದಿಲ್ಲ. ಸಂಸ್ಕೃತಿ ಚಿಂತನೆಯ ಸೂಕ್ಷ್ಮಸಂವೇದಿ ಒಳನೋಟಗಳ ಬರಹಗಾರರಾಗಿಯೂ ತಮ್ಮ ಗುರುತನ್ನು ಸ್ಪಷ್ಟವಾಗಿ ದಾಖಲಿಸುತ್ತಿದ್ದಾರೆ.

ಈ ನೆಲದ ಸಂಸ್ಕೃತಿಯನ್ನು ಪ್ರಜ್ಞಾಪೂರ್ವಕವಾಗಿ ಆರೋಗ್ಯಕರವಾದ ಚಿಂತಿಸುವಂತಹ ವ್ಯಕ್ತಿತ್ವದವರಾಗಿ ಕಂಡುಬರುತ್ತಾರೆ. ಈ ಸಮಾಜದ ಬಗ್ಗೆ ಇರುವಂತಹ ಸಿಟ್ಟು, ಆಕ್ರೋಶ ಒಳಗುದಿಯಲ್ಲಿ ಸ್ಫೋಟಿಸುವಂತಿದ್ದರೂ, ಅವರ ಬರಹಗಳಲ್ಲಿ ತಣ್ಣಗೆ

ಹೇಳುವುದರ ಮುಖೇನ ಸಂಸ್ಕೃತಿಯ ಅರಿವನ್ನುಂಟು ಮಾಡುವ ನಿಸರ್ಗ ಪ್ರೀತಿಯನ್ನು ಬಿತ್ತುವ ಆರೋಗ್ಯಕರವಾದ ಸಾಹಿತ್ಯದ ಕೆಲಸ ಇವರಲ್ಲಿ ಕಂಡುಬರುತ್ತದೆ.

ಮೊಗಳ್ಳಿ ಅವರು ದಲಿತ ಬದುಕಿನ ವಾಸ್ತವತೆಯನ್ನು ಗ್ರಹಿಸಿ ಅವರ ಜೀವನದ ಸಂವೇದನೆಗಳಿಗೆ ಅತ್ಯಂತ ಕಠಿಣ ಒಳನೋಟ, ಸಮಗ್ರ ಗ್ರಹಿಕೆ, ಉತ್ಕಟಭಾವ ನಿರೂಪಣೆ ಅವರ ಎಲ್ಲ ಬಗೆಯ ಬರಹಗಳ ಸಂಯುಕ್ತಗುಣ. ಮನುಷ್ಯರ ಆದಿಮ ಪ್ರಜ್ಞೆಯಿಂದ ಹಿಡಿದು ಆಧುನಿಕೋತ್ತರ ಸಮಾಜಗಳ ಭಗ್ನತೆಯವರೆಗಿನ ಹುಡುಕಾಟಗಳನ್ನು ಹಿಂಬಾಲಿಸಿ ಸಾಗುವ ಮೊಗಳ್ಳಿಯ ಸೃಜನಶೀಲ ಪಯಣವು ಕನ್ನಡ ಸಾಹಿತ್ಯಕ್ಕೆ ಒಂಟಿಯಂತೆ ಕಂಡರೂ, ಅದು ಶಾಶ್ವತವಾದ ಹಾದಿಯನ್ನು ಕ್ರಮಿಸುವಂತಹದ್ದು.

ಈ ನಿಟ್ಟಿನಲ್ಲಿ ಮೊಗಳ್ಳಿಯ ಸೃಷ್ಟಿಶೀಲ ನಿರೂಪಣೆಗಳು, ತರ್ಕದ ಬಹುರೂಪಿ ವಿನ್ಯಾಸಗಳು ಒಳಿತು ಕೆಡಕಿನ ತುಡಿತಗಳು ಭಾಷೆ ಮತ್ತು ಭಾವದ ಮೇಲಿನ ಹಿಡಿತ ಹಾಗೂ ಮನುಷ್ಯ ಸಂಬಂಧವನ್ನು ವಿಸ್ತರಿಸುವ ರೀತಿ ಸಾರ್ವಕಾಲಿಕವಾದುದು ನಿರ್ಮಿತವಾದ ಸೀಮಿತ ಚೌಕಟ್ಟಿಗೆ ಸಿಲುಕದೆ ಬರಹದ ಶೋಧವನ್ನೇ ಧ್ಯಾನಿಸಿ ಮೈದುಂಬಿ ಬರೆದ ಮೊಗಳ್ಳಿ ಬರಹಗಳು ಕನ್ನಡನಾಡಿಗೆ ಗೌರವ ತರುವಂಥವು ಅವರು ತಮ್ಮ ಕಥೆಯ ಓದುವಿಕೆಯಿಂದಾಗುವ ಸಂವೇದನೆಯ ಬಗ್ಗೆ ಹೇಳುವ ಮಾತು ಅವರ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಸುಮ್ಮನೆ ಈ ಕಥೆಗಳನ್ನು ಸಮೀಪಕ್ಕೆ ಕರೆದುಕೊಳ್ಳುವ ಸಂವೇದನೆಗೆ ಯಾವ ಅಡ್ಡಿಯೂ ಬರುವುದಿಲ್ಲ. ಅದು ಲಿಂಗ, ಜಾತಿ, ವರ್ಗ, ಧರ್ಮ, ಭಾಷೆ ಇಂತಹ ಯಾವ ತಡೆಗೋಡೆಗಳಿಗೂ ಒಗ್ಗುವಂತಹುದ್ದಲ್ಲ. "ಮಾನವ ಜಾತಿ ತಾನೊಂದೆವಲಂ" ಎಂಬ ಭಾವನೆ ನಿಜವಾದ ಸಂವೇದನೆ. ಈ ಸಂವೇದನೆಯ ಬನದಲ್ಲಿ ಓದುಗರು ವಿಹರಿಸಿದರೆ ಸಮಾಜದ ಮನಸ್ಸು ಸ್ವಸ್ಥವಾಗಿರಬಲ್ಲದು. ಇದು ಕೇವಲ ಕಥೆಗೆ ಸಂಬಂಧಿಸಿದಂತೆ ಅರ್ಥೈಸದೆ ಅವರ ವ್ಯಕ್ತಿತ್ವ ಮತ್ತು ಮನುಷ್ಯ ಪ್ರೀತಿ ಎಂತಹದ್ದು ಎಂಬುದನ್ನು ಅರಿಯಬೇಕು. ಮೊಗಳ್ಳಿ ಗಣೇಶ್ ಅವರ ಇಂತಹ ಪ್ರತಿಭೆ ಮತ್ತು ವ್ಯಕ್ತಿತ್ವಕ್ಕೆ ಕಾರಣ ಅವರಿಗೆ ವಿಶಿಷ್ಟವಾದ ಸಾಂಸ್ಕೃತಿಕ ಆತಂಕದಿಂದ ಹುಟ್ಟಿಕೊಂಡ ವೈಚಾರಿಕತೆಗಳು ನೆಲೆಗಳು ಅವರ ಸಾಹಿತ್ಯದುದ್ದಕ್ಕೂ ಹರಿದಾಡಿರುವುದು ಗಮನಾರ್ಹವಾದುದು. ಮೊಗಳ್ಳಿ ಗಣೇಶ್ ಅವರ ಕಥೆಗಳಲ್ಲಿನ ಭಾಷೆ ವಿಶಿಷ್ಟವಾದುದು. ತಳಸಮುದಾಯದವರು ಬಳಸುವ ದೈನಂದಿನ ಆಡುಭಾಷೆ, ಬೈಗುಳದ ಭಾಷೆ ಮತ್ತು ಶಿಷ್ಟ ಸಮುದಾಯದ ಶಾಸ್ತ್ರಬದ್ಧವಾದ ಭಾಷೆಯನ್ನು ವಿಭಿನ್ನ ನೆಲೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಇದು ಅವರ ಸೃಜನಶೀಲತೆ ಮತ್ತು ಕಲಾತ್ಮಕಗುಣ ತೋರುತ್ತದೆ. ತನ್ನ ಪ್ರಾದೇಶಿಕ ಭಾಷೆ ಮತ್ತು

ಕಥಾಸಂಕಲನದಲ್ಲಿ ವ್ಯಕ್ತಪಡಿಸಿರುವುದು ಅವರ ನಿಜವಾದ ಸೃಜನಶೀಲತೆಯ ತಾಯಿಬೇರಾಗಿದೆ.

ಇವರ ಕಥಾಸಂಕಲನಗಳಲ್ಲಿ ಆಚಾರ-ವಿಚಾರ, ಸಂಪ್ರದಾಯ-ನಂಬಿಕೆ ಹೀಗೆ ಹಲವು ನೆಲೆಗಳನ್ನೇ ಬಿಚ್ಚಿಡುತ್ತಾರೆ. ಕಥೆಗಳಲ್ಲಿ ಹೆಚ್ಚಾಗಿ ಮಹಿಳೆಯರ ದೌರ್ಜನ್ಯ, ಹಿಂಸೆ, ಬಡತನ, ಹಸಿವು, ಬದುಕಿನ ಸಂಘರ್ಷ, ಸ್ತ್ರೀಬಲಿ, ದುರ್ಬಳಕೆ ಇಷ್ಟಲ್ಲದೆ ಹೆಣ್ಣಿಗೆ ಆಗುವ ಎಲ್ಲಾ ಅನುಭವಗಳನ್ನು ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಲ್ಲಿ ಸಹಜವಾಗಿ ಅಭಿವ್ಯಕ್ತಿಸಿದ್ದಾರೆ. ಮಕ್ಕಳ ಮತ್ತು ಪ್ರಾಣಿಗಳ ಬದುಕಿನ ಹಲವು ನೆಲೆಗಳನ್ನು ತಮ್ಮ ಕಥೆಗಳಲ್ಲಿ ವಸ್ತು, ಪಾತ್ರಗಳಾಗಿ ಮಾಡಿಕೊಂಡಿರುವುದನ್ನು ಕಾಣುತ್ತೇವೆ.

ಮೊಗಳ್ಳಿ ಗಣೇಶ್ ಅವರ ಕಥೆಗಳಲ್ಲಿ ಒಟ್ಟಾರೆ ಪ್ರಾದೇಶಿಕ ತಳಸಮುದಾಯದ ಬದುಕನ್ನು ಮತ್ತು ಸಾಂಸ್ಕೃತಿಕ ಅರಿವನ್ನು, ತಮ್ಮ ಗ್ರಾಮೀಣ ವ್ಯವಸ್ಥೆಯನ್ನು, ಕಥೆಗಳಲ್ಲಿ ವಿಭಿನ್ನ ನೆಲೆಯಾಗಿ, ಎಲ್ಲಾ ಆಯಾಮದಿಂದಲೂ ಕಥೆಗಳು ಈ ಸಂಪ್ರಬಂಧಕ್ಕೆ ಸೂಕ್ತವೆನಿಸಿ ಈ ಸಂಶೋಧನೆಯನ್ನು ಕೈಗೊಳ್ಳಲು ಇಂದು ಮತ್ತು ಮುಂದಿನ ಸಂಶೋಧನೆಗೆ ಹೊಸ ತಿರುವು ಮೂಡಲಿ ಎಂದು ಈ ಅಧ್ಯಯನದ ಶೋಧವನ್ನು ಮಾಡಲಾಗಿದೆ.

# ಗ್ರಂಥಋಣ


೧. ಅರವಿಂದ ಮಾಲಗತ್ತಿ(ಸಂ), ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨, ಬೆಂಗಳೂರು.

೨. ಅರ್ಜುನ ಗೊಳಸಂಗಿ(ಸಂ), ಕನ್ನಡ ದಲಿತ ಸಾಹಿತ್ಯ : ಸಮಾಲೋಕನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೨, ಬೆಂಗಳೂರು.

೩. ಅರವಿಂದ ಮಾಲಗತ್ತಿ(ಸಂ), ಕನ್ನಡ ವಿಮರ್ಶೆಯ ಮಾರ್ಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೨೦೦೪, ಮೈಸೂರು.

೪. ಅರ್ಜುನ ಗೊಳಸಂಗಿ, ದಲಿತಜ್ಞ, ದಲಿತ ಸಾಹಿತ್ಯ ಪರಿಷತ್ತು, ೨೦೦೦, ಗದಗ.

೫. ಅರವಿಂದ ಮಾಲಗತ್ತಿ, ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ೨೦೦೩, ಬೆಂಗಳೂರು.

೬. ಈ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ : ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ, ೨೦೦೩, ಬೆಂಗಳೂರು.

೭. ಆರ್.ಇಂದಿರಾ, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ೨೦೦೨, ಹಂಪಿ.

೮. ಕರೀಗೌಡ ಬೀಚನಹಳ್ಳಿ, ಶತಮಾನದ ಸಣ್ಣ ಕಥೆಗಳ ಸಮೀಕ್ಷೆ, ೨೦೦೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯. ಕೀರ್ತಿನಾಥ ಕುರ್ತುಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ೧೯೬೨, ಮನೋಹರ ಗ್ರಂಥಮಾಲಾ, ಧಾರವಾಡ.

೧೦. ಎಚ್.ದುಂಡಪ್ಪ(ಸಂ), ಬಿ.ಎನ್.ಸುಮಿತ್ರಬಾಯಿ ಸುವರ್ಣ ಸಾಹಿತ್ಯ ವಿಮರ್ಶೆ, ೨೦೦೬, ಸುವರ್ಣ ಕರ್ನಾಟಕ.

೧೧. ದಿವಾಕರ ಎಸ್.(ಸಂ), ಶತಮಾನದ ಸಣ್ಣಕತೆಗಳು, ೧೯೯೭, ಪ್ರಿಸಂ ಬುಕ್‌ಹೌಸ್, ಬೆಂಗಳೂರು.

೧೨. ಜಿ.ಎಚ್.ನಾಯಕ್, ಮೌಲ್ಯಮಾರ್ಗ(ಸಂಪುಟ –೧), ಸಿರಿವರ ಪ್ರಕಾಶನ, ೨೦೦೧, ಬೆಂಗಳೂರು.

೧೩. ನಾಗರಾಜ.ಆರ್, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ೧೯೯೬, ಸಾಗರ.

೧೪. ಪುರುಷೋತ್ತಮ ಬಿಳಿಮಲೆ, ಬಂಡಾಯ – ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೦, ಬೆಂಗಳೂರು.

೧೫. ಎಚ್.ಟಿ.ಪೋತೆ, ದಲಿತ ಸಾಹಿತ್ಯ ಸಂಸ್ಕೃತಿ, ಸಪ್ನ ಬುಕ್‌ಹೌಸ್, ೨೦೧೧, ಬೆಂಗಳೂರು.

೧೬. ಬರಗೂರು ರಾಮಚಂದ್ರಪ್ಪ, ಬಂಡಾಯ ಸಾಹಿತ್ಯ ಮೀಮಾಂಸೆ, ಅನ್ವೇಷಣೆ ಪ್ರಕಾಶನ, ೧೯೯೧, ಬೆಂಗಳೂರು.

೧೭. ಮುನಿವೆಂಕಟಪ್ಪ .ವಿ(ಸಂ), ದಲಿತ ಸಆಹಿತ್ಯ ದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೨, ಬೆಂಗಳೂರು.

೧೮. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿ.ವಿ., ೧೯೯೯, ಹಂಪಿ.

೧೯. ಮೊಗಳ್ಳಿ ಗಣೇಶ್, ದೇಶಿ, ಪ್ರಸಾರಾಂಗ, ಕನ್ನಡ ವಿ.ವಿ., ೧೯೯೭, ಹಂಪಿ.

೨೦. ಮೊಗಳ್ಳಿ ಗಣೇಶ್, ದಲಿತ ಕಥನ, ಪ್ರಸಾರಾಂಗ, ಕನ್ನಡ ವಿ.ವಿ., ೨೦೦೬, ಹಂಪಿ.

೨೧. ಮೊಗಳ್ಳಿ ಗಣೇಶ್, ಶತಮಾನ, ಲೋಹಿಯಾ ಪ್ರಕಾಶನ, ೨೦೦೦, ಹಂಪಿ.

೨೨. ಮೊಗಳ್ಳಿ ಗಣೇಶ್, ಮೊಗಳ್ಳಿ ಕಥೆಗಳು, ಸಪ್ನ ಬುಕ್‌ಹೌಸ್, ೨೦೦೮, ಬೆಂಗಳೂರು.

೨೩. ಮೊಗಳ್ಳಿ ಗಣೇಶ್, ಕನ್ನೆ ಮಳೆ, ಅಂಕಿತ ಪುಸ್ತಕ, ೨೦೧೦, ಬೆಂಗಳೂರು.

೨೪. ಮೊಗಳ್ಳಿ ಗಣೇಶ್, ಜಾತಿಮೀಮಾಂಸೆ, ಅಭಿನವ ಪ್ರಕಾಶನ, ೨೦೧೫, ಬೆಂಗಳೂರು.

೨೫. ಸಿ.ಎನ್.ರಾಮಚಂದ್ರನ್, ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೭, ಬೆಂಗಳೂರು.

೨೬. ರಹಮತ್ ತರೀಕೆರೆ, ಪ್ರತಿ ಸಂಸ್ಕೃತಿ, ಅಭಿನವ ಪ್ರಕಾಶನ, ೨೦೧೧, ಬೆಂಗಳೂರು.

೨೭. ವಿಜಯಶ್ರೀ ಸಬರದ(ಸಂ.), ಮಹಿಳೆ ಶೋಷಣೆ ಸವಾಲುಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾನಿಲಯ, ೨೦೦೫, ಗುಲಬರ್ಗಾ.

೨೮. ಎಲ್.ಎಸ್.ಶೇಷಗಿರಿರಾವ್(ಸಂ.), ೧೯೬೨, ಕನ್ನಡ ಸಣ್ಣಕಥೆಗಳು, ಬೆಂಗಳೂರು ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್, ಬೆಂಗಳೂರು.

೨೯. ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ, ೧೯೯೯, ಬೆಂಗಳೂರು.

೩೦. ಕಾ.ವೆಂ.ಶ್ರೀನಿವಾಸಮೂರ್ತಿ, ದಲಿತತತ್ವ : ಅಕ್ಷರವಾಗದ ಆತ್ಮಕಥಾನಕ, ಲಡಾಯಿ ಪ್ರಕಾಶನ, ೨೦೧೦, ಗದಗ.

೩೧. ಕೆ.ಬಿ.ಸಿದ್ದಯ್ಯ(ಸಂ), ದಲಿತಕಾವ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೬, ಬೆಂಗಳೂರು.

೩೨. ಕೆ.ಬಿ.ಸಿದ್ದಯ್ಯ(ಸಂ), ಉರಿಕಂಡಾಯ, ಅಂಕಿತ ಪ್ರಕಾಶನ, ೨೦೦೯, ಬೆಂಗಳೂರು.

೩೩. ಎಲ್.ಹನುಮಂತಯ್ಯ(ಸಂ), ದಲಿತ ಕಥೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೬, ಬೆಂಗಳೂರು.

೩೪. ಎಲ್. ಹನುಮಂತಯ್ಯ, ದಲಿತಲೋಕದ ಒಳಗೆ, ವಾಹಿನಿ ಪ್ರಕಾಶನ, ೧೯೯೦, ಬೆಂಗಳೂರು.

೩೫. ಹಾಲತಿ ಸೋಮಶೇಖರ್, ಮಹಿಳಾ ಚಳುವಳಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ೨೦೦೩, ವಿಸ್ಮಯ ಪ್ರಕಾಶನ, ಮೈಸೂರು

೩೬. ಸಿ.ಬಿ.ಹೊನ್ನಯ್ಯ, ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ, ಮುದ್ದು ಶ್ರೀಗ್ರಂಥಮಾಲೆ ಪ್ರಕಾಶನ, ಕೆ.ಎಸ್.ಮುದ್ದಪ್ಪ ಸ್ಮಾರಕ, ೨೦೦೪, ಬೆಂಗಳೂರು.

೩೭. ಹಿರೇಮಠ.ಎಸ್.ಎಸ್, ದಲಿತ ಸಂಸ್ಕೃತಿ, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

-----